# ಅಚಲ

ದ್ವೈಮಾಸಿಕ ಮೇ - 1994

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ಬೆಂಗಳೂರು.

22

"ಅಚಲ" ಪತ್ರಿಕೆಯನ್ನು ಪಡೆಯ ಬಯಸು ವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹದಿನೈದು ರೂಪಾಯಿಗಳನ್ನು ಎಂ. ಓ/ಡ್ರಾಫ್ಟ್ ಮೂಲಕ ಕಳುಹಿಸಿ, ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟ ವಾಗಿ ಬರೆಯಬೇಕು. ಚೆಕ್ ಮೂಲಕ ಹಣ ಕಳಿಸು ವವರು 20/ರೂ. ಗಳಿಗೆ ಕಳಿಸಬೇಕು. ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೆ ಕಾರ್ಡಿನಲ್ಲಿ ಬರೆದು ತಿಳಿಸಬೇಕು.



ಚಂದಾ ವಿವರ :

| | | | |
|---|---|---|---|
| ವಾರ್ಷಿಕ ಚಂದಾ | : | ರೂ. | 15–00 |
| ಅಜೀವ ಚಂದಾ | : | ರೂ. | 150–00 |
| ಚೆಕ್ ಮೂಲಕ | : | ರೂ. | 160–00 |
| ಸಂಸ್ಥೆಗಳಿಗೆ | : | ರೂ. | 200–00 |
| ಬಿಡಿ ಪ್ರತಿ | : | ರೂ. | 2–00 |
| ವಿಶೇಷ ಪ್ರತಿ | : | ರೂ. | 3–50 |

Printed at Janashakthi Printers
5th Main Road, Gandhinagar
BANGALORE-560 009

Published by: Dr. G. Ramakrishna
on behalf of Jagruthi Mahila Adhyayana
Kendra, 26, I Main Road, Vyalikaval
BANGALORE-560 003

Editor : **N. Gayathri**

ಪ್ರಿಯ ಚಂದಾದಾರರೇ,

ಚಂದಾ ನವೀಕರಿಸಿ, ನಿಮ್ಮ ಸ್ನೇಹವಲಯಕ್ಕೂ "ಅಚಲ" ಪರಿಚಯಿಸಿ. ಎಂ. ಓ. ಮೂಲಕ ಚಂದಾ ದಾರರಾಗುವವರಲ್ಲಿ ವಿಶೇಷ ವಿನಂತಿ. ಎಂ. ಓ. ಫಾರಂನಲ್ಲಿ ತಪ್ಪದೆ ನಿಮ್ಮ ವಿಳಾಸ ಬರೆಯಿರಿ. ಹೀಗೆ ವಿಳಾಸ ಬರೆಯದೆ, ಹಣ ಸಂದಾಯ ಮಾಡುವ ಪ್ರಕರಣಗಳು ಈಗ ಹೆಚ್ಚುತ್ತಿವೆ. ದಯವಿಟ್ಟು ಮರೆಯದೆ ನಿಮ್ಮ ವಿಳಾಸ ಬರೆಯಿರಿ.

**ಲೇಖನ, ಹಣ ಕಳುಹಿಸಬೇಕಾದ ವಿಳಾಸ :**

**ಎನ್. ಗಾಯಿತ್ರಿ**

ಬಿ–30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್
9ನೇ ಕ್ರಾಸ್, ಒಂದನೆ ಮೇನ್, ವಿಜಯನಗರ
2ನೇ ಹಂತ, ಬೆಂಗಳೂರು–560 040

ಆತ್ಮೀಯರೆ,

'ಅಚಲ' ನಿಮ್ಮ ಪತ್ರಿಕೆ. ಇದನ್ನು ಉಳಿಸಿ ಬೆಳೆಸುವುದು ಚಂದಾದಾರರ, ಲೇಖಕರ, ಹಾಗೂ ಹಿತೈಷಿಗಳ ಕೈಯಲ್ಲಿದೆ. ಈ ಪತ್ರಿಕೆ ಇನ್ನೂ ಹೆಚ್ಚು ಅರ್ಥಪೂರ್ಣವಾಗಿ, ಸಶಕ್ತವಾಗಿ ಹೊರಬರಲು ಹೆಚ್ಚಿನ ಚಂದಾದಾರರ, ವಿಚಾರವಂತ ಲೇಖಕರ ಹೆಚ್ಚಿನ ಸಹಕಾರದ ಅಗತ್ಯವಿದೆ. ಅಷ್ಟೇ ಅಲ್ಲ, ಓದು ಗರ ಟೀಕೆ, ಟಿಪ್ಪಣಿಗಳು ಪತ್ರಿಕೆಯನ್ನು ಬೆಳೆಸುತ್ತದೆ; ತಿದ್ದುತ್ತದೆ. ಇದಕ್ಕೆ ಹೃತ್ಪೂರ್ವಕವಾದ ಸ್ವಾಗತ ವಿದೆ.

# ಸಂಪಾದಕೀಯ

## ಮತ್ತೆ ಮರುಕಳಿಸಿದ ಜಲಿಯನ್‌ವಾಲಾಬಾಗ್

ಇತಿಹಾಸ ಚಕ್ರ ಮತ್ತೆ ಹಿಂದಕ್ಕೆ ತಿರುಗಿತೇ ?

1919ರ ಏಪ್ರಿಲ್ 13, ಪರಾಡಳಿತದಲ್ಲಿದ್ದ ಭಾರತದಲ್ಲಿ ವೈಶಾಖಿಯ ಸಂಭ್ರಮ ವಿಶಿಷ್ಟವಾಗಿತ್ತು. ರೌಲತ್ ವಿಧಾಯಕಗಳನ್ನು ಅಮಾನತ್ತಿನಲ್ಲಿಡಬೇಕೆಂಬ ಕೂಗು ಪಂಜಾಬಿನಿಂದ ಭಾರತದ ಇತರ ಎಲ್ಲ ಭಾಗಗಳಿಗೂ ಕೇಳುವಂತೆ ಜಲಿಯನ್‌ವಾಲಾಬಾಗ್‌ನಿಂದ ಮೊಳಗಿಸುವುದು ಆ ವರ್ಷದ ಸಂಭ್ರಮದ ವಿಶಿಷ್ಟ ಉದ್ದೇಶವಾಗಿತ್ತು. ಅಂದು ಸುಮಾರು ಇಪ್ಪತ್ತು ಸಾವಿರ ದೇಶಪ್ರೇಮಿಗಳು ತಮ್ಮ ಪ್ರತಿಭಟನೆಯನ್ನು ಸೂಚಿಸಲು ಅಲ್ಲಿ ನೆರೆದಿದ್ದರು. ಆಗ ಅಲ್ಲಿಗೆ ಬಂದ ಬ್ರಿಟಿಷ್ ಸೈನ್ಯಾಧಿಕಾರಿ ಜನರಲ್ ಡಯರ್‌ರವರು ಸುರಿಸಿದ 1650 ಸುತ್ತುಗಳ ಗುಂಡಿನ ದಾಳಿಯಿಂದ 1516 ಜನ ಮರಣವಪ್ಪುವಂತೆ ಮಾಡಿದ್ದರು ; ರಕ್ತದ ಕೋಡಿ ಹರಿಸಿದ್ದರು.

1994ರ ಏಪ್ರಿಲ್ 15, ಸ್ವತಂತ್ರ ಭಾರತದಲ್ಲಿ ದೇಶಾದ್ಯಂತ ಗ್ಯಾಟ್ ಒಪ್ಪಂದದ ವಿರುದ್ಧ ರಾಷ್ಟ್ರವ್ಯಾಪಿ ಪ್ರತಿಭಟನೆ ನಡೆಯಿತು. 85 ಕೋಟಿ ಭಾರತೀಯ ಜನಸ್ತೋಮವನ್ನು ದಿಗ್ಬಂಧನದಲ್ಲಿಡುವಂಥ ಅಂತರ ರಾಷ್ಟ್ರೀಯ ಗುಲಾಮಗಿರಿಯ ಒಪ್ಪಂದಕ್ಕೆ ಸಹಿ ಮಾಡುವ ಭಾರತ ಸರ್ಕಾರದ ಹುನ್ನಾರದ ವಿರುದ್ಧ ಪ್ರತಿಭಟನೆಯ ಅಲೆ ಇದಾಗಿತ್ತು. ಭಾರತದ ಜನತೆ ವಿವಿಧ ರೀತಿಗಳಿಂದ ಪ್ರತಿಭಟನೆಗಳನ್ನು ಸೂಚಿಸಿದರು. ಮತ ಪ್ರದರ್ಶನ, ಮೆರವಣಿಗೆ, ಧರಣಿ, ಸತ್ಯಾಗ್ರಹ, ಕಾರ್ಗಿಲ್ ಕಛೇರಿಗೆ ಮುತ್ತಿಗೆ ಇತ್ಯಾದಿಗಳು ದೇಶಾದ್ಯಂತ ನಡೆದವು. ಇಂತಹುದೇ ಪ್ರತಿಭಟನಾ ಕಾರ್ಯವೊಂದನ್ನು ಬೆಂಗಳೂರಿನಲ್ಲೂ ವ್ಯವಸ್ಥೆ ಮಾಡಲಾಗಿತ್ತು. ರಾಜಭವನವನ್ನು ಮುತ್ತಿಗೆ ಹಾಕಲು ಹೊರಟ ಸಿ.ಪಿ.ಐ.(ಎಂ.) ಮತ್ತು ಹಲವಾರು ಎಡ ಸಂಘಟನೆಗಳ ಮುಖಂಡರು ಮತ್ತು ಕಾರ್ಯಕರ್ತರು ಪೊಲೀಸರ ದೌರ್ಜನ್ಯದ ರುಚಿ ಕಂಡರು. ಹಿಂದಿನ ಬ್ರಿಟಿಷ್ ಅಧಿಕಾರಿ ಡಯರ್‌ನನ್ನು ನಾಚಿಸುವಂತೆ ಕ್ರೂರವಾಗಿ ವರ್ತಿಸಿದರು. ಯಾವುದೇ ಪ್ರಚೋದನೆಯಿಲ್ಲದೆ ಪ್ರದರ್ಶನಕಾರರಿಗಿಂತ ಎರಡು ಪಟ್ಟು ಹೆಚ್ಚಿದ್ದ ಪೊಲೀಸರು ರಾಜ್ಯದಲ್ಲಿ ಇದೇ ಪ್ರಥಮಬಾರಿಗೆ 'ಜಲಫಿರಂಗಿ'ಯನ್ನು ಉಪಯೋಗಿಸಿ ಕಡು ವೈರಿಗಳನ್ನು ಥಳಿಸುವ ರೀತಿಯಲ್ಲಿ ಲಾಠಿ ಪ್ರಹಾರವನ್ನು ನಡೆಸಿದರು. ಪೊಲೀಸ್ ಅಧಿಕಾರಿಗಳು ಸ್ವತಃ ಮುಖಂಡರಿಗೆ ಹೊಡೆದು ಮುಗಿಸಲು ಆಜ್ಞೆಯನ್ನು ನೀಡುತ್ತಿದ್ದರು. ಪ್ರದರ್ಶನಕಾರರಿಗೆ ಹೆಣ್ಣು, ಗಂಡೆನ್ನುವ ಬೇಧವಿಲ್ಲದೆ ಮೈಯೆಲ್ಲಾ ಬಾಸುಂಡೆಗಳು ಬರುವ ಹಾಗೆ ಲಾಠಿಗಳನ್ನು ಬಳಸಿ ಹೊಡೆದರು. ಮುರಿದ ಬೆತ್ತದ ಸಂಖ್ಯೆ ಲೆಕ್ಕಕ್ಕೆ ಸಿಗದು. ಮುರಿದ ಕೈ ಕಾಲುಗಳು, ಒಡೆದ ತಲೆಗಳು, ರಕ್ತ ಸುರಿಸಿ ಸೋತ ಮೈಗಳು ಅಂದು ಎಲ್ಲೆಲ್ಲೂ ಹೇರಳವಾಗಿ ಕಂಡುಬರುತ್ತಿದ್ದವು. ಎಲ್.ಐ.ಸಿ. ಮುಖಂಡರೊಬ್ಬರು ಪೊಲೀಸ್ ಲಾಠಿ ಏಟಿನಿಂದ ಹೃದಯಾಘಾತವಾಗಿ ಕೂಡಲೇ ಇಂಟೆನ್ಸಿವ್ ಕೇರ್ ಘಟಕ ಸೇರಬೇಕಾಯ್ತು. ಮಹಿಳಾ ಪ್ರದರ್ಶನಕಾರರ ಮೇಲೆ ಅತ್ಯಂತ ಕ್ರೂರವಾಗಿ ವರ್ತಿಸಿ ಥಳಿಸಿರುವುದೇ ಅಲ್ಲದೇ, ಸೀರೆ ಹಿಡಿದೆಳೆಯುವ ನೀಚ ಮಟ್ಟಕ್ಕೂ ಇಳಿದ ಪೊಲೀಸ್ ದೌರ್ಜನ್ಯ ತೀರ ಖಂಡನೀಯ. ಪೂರ್ವ ನಿಯೋಜಿತವಾದ ಪೊಲೀಸ್ ದೌರ್ಜನ್ಯಕ್ಕೆ ಕಳಶವಿಟ್ಟಂತೆ ಪ್ರದರ್ಶನಕಾರರನ್ನು ಬಂಧಿಸಿ ಅವರ ಮೇಲೆ ಕೊಲೆ ಆಪಾದನೆಯನ್ನು ಹೊರಿಸಲಾಗಿದೆ.

1991ರಲ್ಲಿ ಕೇಂದ್ರ ಸರ್ಕಾರವು ತಂದ ಹೊಸ ಆರ್ಥಿಕ ಹಾಗೂ ಕೈಗಾರಿಕಾ ನೀತಿಯ ವಿಷವ್ಯೂಹವು 1994ರ ಏಪ್ರಿಲ್ 15ರಂದು ಗ್ಯಾಟ್ ಒಪ್ಪಂದಕ್ಕೆ ಸಹಿ ಹಾಕುವುದರೊಂದಿಗೆ ಪೂರ್ಣವಾಗಿದೆ. ಈ ಮೂಲಕ ಸ್ವಾತಂತ್ರ್ಯಾನಂತರ ನಮ್ಮ ದೇಶ ಅನುಸರಿಸಿದ ಮೂಲಭೂತ ಧೋರಣೆಗಳಿಗೆ ತಿಲಾಂಜಲಿ ನೀಡಿದಂತಾಗಿದೆ ಹಾಗೂ ಮಾರುಕಟ್ಟೆ ಶಕ್ತಿಯ ತೋಳಗಳಿಗೆ ಬಡ ಜನರನ್ನು ಬಲಿಕೊಡಲಾಗಿದೆ. ಸಂವಿಧಾನದಲ್ಲಿ ಮಾತ್ರ ಉಳಿದಿರುವ ಸಮಾಜವಾದಿ ಧೋರಣೆಗಳು, ಸಾಮಾಜಿಕ ನ್ಯಾಯವಿರಬೇಕೆಂಬ ಕಾಳಜಿಗಳು ಇನ್ನು ಮುಂದೆ ಕಣ್ಮರೆಯಾಗಲಿವೆ. ಸಾರ್ವಜನಿಕ ರಂಗದ ಉದ್ದಿಮೆಗಳ ನಾಶ, ವಿದೇಶೀ ಸಂಸ್ಥೆಗಳಿಗೆ ಮುಕ್ತದ್ವಾರ ನೀತಿ, ದೇಶೀಯ ತಂತ್ರಜ್ಞಾನವನ್ನು

ಮೂಲೆಗುಂಪು ಮಾಡುವುದು ಹೊಸ ನೀತಿಯ ಬಹುಮುಖ್ಯ ತಂತ್ರಗಳಾಗಿವೆ. ಬ್ಯಾಂಕ್, ವಿಮೆ, ಸಾರಿಗೆ, ವಿದ್ಯುಚ್ಛಕ್ತಿ– ಮುಂತಾದ ಸೇವಾಕ್ಷೇತ್ರಗಳ ಖಾಸಗೀಕರಣ, ತ್ವರಿತಗತಿಯಿಂದ ಸಾಗುತ್ತಿದೆ. ಭಾರತದ ಕೈಗಾರಿಕೆಗಳನ್ನು ಕೃಷಿ ವ್ಯವಸ್ಥೆಯನ್ನು, ಔಷಧಿ ಉದ್ಯಮವನ್ನು ಮತ್ತು ಸಂಶೋಧನೆ, ಅಭಿವೃದ್ಧಿ ಕಾರ್ಯಗಳನ್ನು, ಎಲ್ಲಾ ಸೇವಾಕ್ಷೇತ್ರಗಳನ್ನು ಗ್ಯಾಟ್ ಒಪ್ಪಂದದ ಮೂಲಕ ವಿದೇಶೀ ಬಂಡವಾಳಕ್ಕೆ ಒತ್ತೆ ಇಟ್ಟಂತಾಗಿದೆ. ಆರ್ಥಿಕ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವ ದೇಶ ರಾಜಕೀಯ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ಸಾಧ್ಯವೇ ?

ಈ ಆರ್ಥಿಕ, ರಾಜಕೀಯ ಹಾಗೂ ಸಾಮಾಜಿಕ ದಿಗ್ಬಂದನವನ್ನೆಲ್ಲಾ ಮುರಿದು ನಮ್ಮ ದೇಶವು ಮತ್ತೊಮ್ಮೆ ಸ್ವತಂತ್ರವಾಗಬೇಕಾಗಿದೆ. ಈ ಸ್ವಾತಂತ್ರ್ಯ ಸಮರದಲ್ಲಿ ಎಷ್ಟು ಜಲಿಯನ್‌ವಾಲಾಬಾಗ್‌ಗಳಾದರೂ ಬರಲಿ, ಕೆಚ್ಚೆದೆಯಿಂದ ನಾವು ಹೋರಾಡಬೇಕಾಗಿದೆ.

## ಕಪ್ಪು ನಾಡಿನಲ್ಲಿ ದೀಪೋತ್ಸವ

1994ರ ಮೇ 3, ಕಗ್ಗತ್ತಲ ನಾಡೆಂದು ಪ್ರಸಿದ್ಧವಾದ ದಕ್ಷಿಣ ಆಫ್ರಿಕೆಯಲ್ಲಿ ಸ್ವಾತಂತ್ರ್ಯದ ಜ್ಯೋತಿ ಬೆಳಗಿದ ದಿನ. ಮಾನವನ ಇತಿಹಾಸದಲ್ಲೇ ಸ್ಮರಣಾರ್ಹ ದಿನ. ಆಫ್ರಿಕಾದ ಜನತೆಯ ವಿಮೋಚನಾ ಹೋರಾಟಕ್ಕಾಗಿ ತನ್ನ ಇಡೀ ಜೀವನವನ್ನೇ ಸಮರ್ಪಿಸಿಕೊಂಡ, ಸುಮಾರು ಇಪ್ಪತ್ತೇಳು ವರ್ಷಗಳ ಜೀವಿತದ ಅವಧಿಯನ್ನು ಕಾರಾಗೃಹ ವಾಸದಲ್ಲಿಯೇ ಕಳೆದ, ಕಪ್ಪು ಜನರ ಮಹಾನ್ ನಾಯಕ ನೆಲ್ಸನ್ ಮಂಡೇಲಾ ಪ್ರಜಾಪ್ರಭುತ್ವದ ಹೋರಾಟದಲ್ಲಿ ಬಹುಸಂಖ್ಯಾತರಿಂದ ಆಯ್ಕೆಯಾಗಿ ವಿಜಯ ಮಾಲೆ ಧರಿಸಿದ್ದಾರೆ. "ನಾನೀಗ ನಿಮ್ಮ ಮುಂದೆ ಅತ್ಯಂತ ಸಂತೋಷದಿಂದ ಹಾಗೂ ಹೆಮ್ಮೆಯಿಂದ ನಿಂತಿದ್ದೇನೆ. ನಾಡಿನ ಅತೀ ಸಾಮಾನ್ಯನ ಹಾಗೂ ವಿನಯವಂತನ ಪ್ರತಿನಿಧಿಯಾಗಿರುವುದರ ಬಗ್ಗೆ ಹೆಮ್ಮೆಯಿದೆ. ಈ ನಾಡು ನಿಮ್ಮದೇ, ನಿಮಗೆ ಸೇರಿದ್ದೇ ಎನ್ನುವುದನ್ನು ಅತ್ಯಂತ ತಾಳ್ಮೆಯಿಂದ, ದೃಢಸಂಕಲ್ಪ ಶಕ್ತಿಯಿಂದ ತೋರಿಸಿದ್ದೀರಿ ; ಅಂತೂ ಕೊನೆಗೆ ನೀವೆಲ್ಲ ಈಗ ಸ್ವತಂತ್ರರೆಂಬುದನ್ನು ಗಟ್ಟಿಯಾಗಿ, ಚಾವಣಿಗಳ ಮೇಲೆ ನಿಂತು ಕೂಗಿ ಹೇಳಬನ್ನಿ" ಎಂದು ಭಾವೋದ್ವೇಗದಿಂದ ಕಪ್ಪು ಜನತೆಯನ್ನು ಕುರಿತು ನೆಲ್ಸನ್ ಮಂಡೆಲಾ ಮಾತನಾಡಿದಾಗ ನೆರೆದಿದ್ದ ಜನಸ್ತೋಮದಲ್ಲಿ ಕಣ್ಣು ತೇವವಾಯಿತು : ಹೃದಯ ನಲಿದಾಡಿತು.

ದಕ್ಷಿಣ ಆಫ್ರಿಕೆಯಲ್ಲಿ ನಡೆದ ಮೊದಲ ಮುಕ್ತವಾದ ಪ್ರಜಾಪ್ರಭುತ್ವ ಮಾದರಿಯ ಚುನಾವಣೆಯಲ್ಲಿ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಶೇಕಡ 62.2 ಮತಗಳಿಂದ ವಿಜಯಿಯಾಗಿ ದಕ್ಷಿಣ ಆಫ್ರಿಕೆಯ ಜವಾಬ್ದಾರಿಯುತ ಪ್ರತಿನಿಧಿಯಾಗಬಲ್ಲ ಲಕ್ಷಣಗಳನ್ನು ತೋರಿಸಿಕೊಂಡಿದೆ. ಆದರೆ ಅದು ಈಗ ಗಳಿಸಿಕೊಂಡಿರುವುದು ರಾಜಕೀಯ ಸ್ವಾತಂತ್ರ್ಯ ಮಾತ್ರ. ಸಾಮಾಜ್ಯಶಾಹಿಯ ಭಯಂಕರ ಹದ್ದು ತಲೆಯ ಮೇಲೆ ಸರ್ವದಾ ಹಾರಾಡುತ್ತಿರುವಾಗ ಈ ರಾಜಕೀಯ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವುದರ ಜೊತೆಗೆ, ನಾಡಿನ ಆರ್ಥಿಕ, ಸಾಮಾಜಿಕ ಪ್ರಗತಿಯತ್ತಲೂ ಅವರು ಹೆಜ್ಜೆ ಹಾಕಬೇಕಾಗಿದೆ.

ನೂರು ವರ್ಷಗಳಿಗೂ ಹೆಚ್ಚಿನ ಇತಿಹಾಸವಿರುವ ಆಫ್ರಿಕಾದ ವಿಮೋಚನಾ ಹೋರಾಟದಲ್ಲಿ ಮಹಿಳೆಯರ ಪಾತ್ರವೂ ಗಮನೀಯವಾಗಿದೆ. 'ಮಹಿಳೆಯರ ವಿಮೋಚನೆಯಿಲ್ಲದೆ ರಾಷ್ಟ್ರೀಯ ವಿಮೋಚನೆ ಇಲ್ಲ. ರಾಷ್ಟ್ರೀಯ ವಿಮೋಚನೆ ಇಲ್ಲದೆ ಮಹಿಳೆಯರ ವಿಮೋಚನೆ ಇಲ್ಲ' ಎಂಬುದನ್ನು ದಕ್ಷಿಣ ಆಫ್ರಿಕಾದ ಸ್ವಾತಂತ್ರ ಪ್ರಿಯರು ಮನಗಂಡಿದ್ದರು. ದಕ್ಷಿಣ ಆಫ್ರಿಕಾದ ಆರೇಂಜ್ ಫ್ರೀ ಸ್ಟೇಟ್‌ನ ಕಪ್ಪು ಮಹಿಳೆಯರು ನೆಲ್ಸನ್ ಮಂಡೇಲಾ ಅವರು ಹುಟ್ಟುವುದಕ್ಕೆ ಐದು ವರ್ಷಗಳ ಮುಂಚೆಯೇ (ಜೂನ್ 6, 1913) ಪಾಸ್ ಕಾಯ್ದೆಯ ವಿರುದ್ಧ ಹೋರಾಡಿದ್ದರು. ದಿ ಫೆಡರೇಷನ್ ಆಫ್ ಸೌತ್ ಆಫ್ರಿಕನ್ ವಿಮೆನ್‌ನ ಸಂಘಟನೆಯ ಮೂಲಕ ದಕ್ಷಿಣ ಆಫ್ರಿಕಾ ಮಹಿಳೆಯರು ಹೆಚ್ಚಿನ ಕೂಲಿಗಾಗಿ ಗಂಡನಿಗೆ ಜೊತೆಯಾಗಿ ಹೋರಾಡಿದ್ದಾರೆ. ಆತನೊಡನೆ ಬದುಕುವುದಕ್ಕಾಗಿ ಪೊಲೀಸರ ಲಾಠಿ ಎದುರಿಸಿದ್ದಾರೆ. ಮಕ್ಕಳ ಶಿಕ್ಷಣಕ್ಕಾಗಿ ಪ್ರತಿಭಟಿಸಿದ್ದಾರೆ. ವಿಮೋಚನಾ ಹೋರಾಟದಲ್ಲಿ ಸತ್ತ ಮಕ್ಕಳಿಗಾಗಿ ಅತ್ತರೂ, ಜೀವದ ಹಂಗು ತೊರೆದು ರಾಜಕೀಯ ಕೈದಿಗಳಿಗಾಗಿ ಬೆಂಬಲ ವ್ಯಕ್ತಪಡಿಸಿದ್ದಾರೆ. ವರ್ಣದ್ವೇಷ ನೀತಿಯ (ಅಪಾರ್ಥೈಡ್) ವಿರುದ್ಧದ ಹೋರಾಟದಲ್ಲಿ ತನ್ನತನವನ್ನು ತೋರಿಸಿದ್ದಾರೆ.

ಜಾಗತಿಕ ಮಹಿಳಾ ಹೋರಾಟದಲ್ಲಿಯೇ ಅರ್ಥಪೂರ್ಣ ಅಧ್ಯಾಯ ಬರೆದ ಕೀರ್ತಿಗೆ ದಕ್ಷಿಣ ಆಫ್ರಿಕಾದ ಮಹಿಳೆಯರು ಪಾತ್ರರಾಗಿದ್ದಾರೆ.

ಈ ಮಹತ್ವದ ಸಂದರ್ಭದಲ್ಲಿ ದಕ್ಷಿಣ ಆಫ್ರಿಕಾ ಜನತೆಯ ಸಂತೋಷವನ್ನು ಹಂಚಿಕೊಂಡು ಅವರನ್ನು ಅಭಿನಂದಿಸುವುದರೊಂದಿಗೆ ಈ ವಿಜಯೋತ್ಸವವನ್ನು ನಮ್ಮ ನಾಡಿನಲ್ಲೂ ಅರ್ಥಪೂರ್ಣವಾಗಿ ಆಚರಿಸಬೇಕಾಗಿದೆ. ಇಲ್ಲಿಯವರೆಗೂ ಈ ಕಪ್ಪು ಜನರ ಮೇಲೆ ದೌರ್ಜನ್ಯ ನಡೆಸಿ, ಅವರ ದಾಸ್ಯಕ್ಕೆ ಕಾರಣರಾದ ಸಾಮ್ರಾಜ್ಯಶಾಹಿಗಳ ಬೇರುಗಳು ನಮ್ಮ ನಾಡಿನಲ್ಲೂ ಆಳವಾಗಿ ಬೇರೂರಲು ಪ್ರಯತ್ನಿಸುತ್ತಿವೆ. ನಮ್ಮ ಘನ (!) ಸರ್ಕಾರದ ಆರ್ಥಿಕ ನೀತಿಯಿಂದಾಗಿ ಹಿಂದೆಂದಿಗಿಂತ ಇಂದು ಹೆಚ್ಚು ವಿಷಾನಿಲವಾಗಿ ಪ್ರಸರಿಸುತ್ತಿದೆ. ಈ ಸಾಮ್ರಾಜ್ಯಶಾಹಿಯ ಬೇರುಗಳನ್ನು ನಿರ್ನಾಮ ಮಾಡುವುದರ ಮೂಲಕ ದಕ್ಷಿಣ ಆಫ್ರಿಕೆಯ ಹೋರಾಟವು ನಂಬಿದ್ದ ಹೋರಾಟ, ಮಾನವೀಯತೆ, ತಾತ್ವಿಕತೆಗೆ ಅರ್ಥ ಕೊಡಬಹುದಾಗಿದೆ. ನೂರಾರು ವರ್ಷಗಳಿಂದ ಆ ಕಪ್ಪು ನಾಡಿನಲ್ಲಿದ್ದ ಕತ್ತಲೆಯನ್ನು, ದಾಸ್ಯವನ್ನು ಹೋಗಲಾಡಿಸುವಲ್ಲಿ ಜನತೆ ಯಶಸ್ವಿಯಾದರು. ನಿಜ. ಆದರೆ, ಸಾವಿರಾರು ವರ್ಷಗಳಿಂದ ನಮ್ಮ ನಾಡಿನಲ್ಲಿ ಬೇರೂರಿರುವ ಅಸ್ಪೃಶ್ಯತೆ, ಲಿಂಗಬೇಧ, ದಾರಿದ್ರ್ಯವನ್ನು ನಾವು ಹೋಗಲಾಡಿಸುವುದೆಂದು ? ಇದೇ ನಮ್ಮ ಮುಂದಿರುವ ತುರ್ತಿನ ಸವಾಲು,

—ಎನ್. ಗಾಯತ್ರಿ

## ಕಾವ್ಯ

### ಸ್ಥಿತಿ

ನಾನು ಚಿರಯೌವ್ವನೆ
ಈಚೀಚೆಗೆ
ವಯಸ್ಸಾದವರಂತೆ
ನಿದ್ರೆ ಬಾರದ ರಾತ್ರಿಗಳು ಮುತ್ತುತ್ತಿವೆ.
ಅರೆಗಳಿಗೆ ನಿದ್ರೆಯೆಂದರೆ
ಕೆಟ್ಟ ಕನಸುಗಳ ಕಾಟ
ನನ್ನ ದೇಹದ ಸುಂದರ ಧಾಮಗಳು
ರಥಯಾರ್ ಖಂಡಗಳಾಗಿ ಸಿಡಿಯುತ್ತಿವೆ.
ಹೃದಯಕ್ಕಂಟಿದ ಪಂಜಾಬ್ ಭಯೋತ್ಪಾದನೆ
ಧವಧವಿಸಿ ಇದೀಗ ನಿಲ್ಲುವ ಸೂಚನೆ.
ಮೆಲ್ಲನೆ ಉಸಿರಾಟ
ನನ್ನ ಕಾಲಿಗಂಟಿದ ನೆಲ ಎಲ್.ಟಿ.ಟಿ,
ಜೋರಾಗಿ ಉಸಿರಾಡಿದರೆ
ಎದುರಾಳಿಯ ತಾಗಿದರೆ
ಭಗ್ಗೆಂದು ಏಳುವ ಮತಾಂಧತೆ
ದುಗುಡ ತುಂಬಿದ ಬದುಕಲಿ
ಖಾಸಗೀಕರಣ ಮಾಯದು
ಡಂಕೆಲ್ ವಣಾವ
ಕುತ್ತಿಗೆಯ ಬಳಸಿದ್ದಾನೆ.
ದೇಹವನ್ನೆಲ್ಲ– ದೇಶವನ್ನೆಲ್ಲ
ನೆಕ್ಕುವ ನಾಲಿಗೆ ಬೃಹದಾಕಾರವಾಗಿ ಚಾಚಿದೆ
ಎಲ್ಲೋ ವಿಹರಿಸುವ ಪ್ರೀತಿಗೆ
ಗಡಿಯಾಚೆ ಬಂಧಿ
ನೋವಿನ ಗೂಡಲ್ಲಿ ಬಲವಂತದ ನಗೆ
ಅಂಟಾರ್ಟಿಕಾದ ಶಿಖರದಲಿ
ಹೆಪ್ಪಿಟ್ಟ ಹಾಲಿನ ಬಟ್ಟಲಿಗೆ
ಬಲತ್ಕಾರದ ವ್ಯಾಮೋಹ
ಹೀಗೆ,
ಎದೆಯು ಚಿತ್ತಾರವೆಲ್ಲ
ಬಟಾ ಬಯಲು
ಭೂಮಿ ಬೀಜದ ಚಿಗುರಿಗಾಗಿ
ಯೋಚನೆಗಳೆಲ್ಲಾ ಹಾರಿ
ಎಲ್ಲೆಲ್ಲಿಗೂ ದಿಕ್ಕು ದೆಸೆಯಿಲ್ಲದೆ
ಪುನಃ ಬಂದು ಗೂಡು ಸೇರುವ ಹಾಗೆ
ಇಚೀಚೆಗೆ
ತಣಿಸಲಾರದ ಸಂಕಟದ ಭಾರ
ನಿಶ್ಚಿಂತೆಯಿಲ್ಲದ ಚಿಂತೆ
ಈ ದೇಶದ ಗದಾಪ್ರಹಾರ
ಮನೆ ಗೂಡಲ್ಲೂ ಯಥಾಪ್ರಕಾರ.

–ಕೆ. ಶಾಂತಕುಮಾರಿ



# ಮಾನವಾಂತಃಕರಣದ ಜೀವಂತಿಕೆಗಾಗಿ ದನಿಯೆತ್ತಿದ ಲೇಖಕಿ : ರಾಜಂ ಕೃಷ್ಣನ್

ಡಾ॥ ಬಿ. ಎನ್. ಸುಮಿತ್ರಾ ಬಾಯಿ

ಅಗ್ಗದ ಕಥೆ, ಕಾದಂಬರಿಗಳನ್ನು ಹೇರಳವಾಗಿ ಉತ್ಪಾದಿಸುವ ವ್ಯವಸ್ಥೆ ಮನುಷ್ಯರ ಅಂತಃಕರಣವನ್ನೇ ಕೆಡಿಸುತ್ತಿರುವುದರ ವಿರುದ್ಧವಾಗಿ ಧ್ವನಿಯೆತ್ತಿದ ಸಾಮಾಜಿಕ ಕಾರ್ಯಕರ್ತೆಯಾದ ರಾಜಂ ಅವರ ಅನೇಕ ಕಥೆ ಕಾದಂಬರಿಗಳು ವಿವಿಧ ಕಾಲೇಜುಗಳು, ವಿಶ್ವವಿದ್ಯಾನಿಲಯಗಳಲ್ಲಿ ಪಠ್ಯ ಪುಸ್ತಕಗಳಾಗಿವೆ ಹಲವಾರು ಗಂಭೀರ ಸಾಹಿತ್ಯ ಸಂಶೋಧಕರು ಇವರ ಕೃತಿಗಳ ಮೇಲೆ ಅಧ್ಯಯನ ನಡೆಸಿದ್ದಾರೆ. ಇಂಥ ಲೇಖಕಿಯೊಬ್ಬರಿಗೆ "ಶಾಶ್ವತಿ"ಯು ಪ್ರಶಸ್ತಿ ನೀಡಿರುವುದು ನಿಜಕ್ಕೂ ಹೆಮ್ಮೆಯ ಮತ್ತು ಅಭಿನಂದನಾರ್ಹ ಸಂಗತಿಯಾಗಿದೆ. ಈ ಸಂದರ್ಭದಲ್ಲಿ ರಾಜಂ ಕೃಷ್ಣನ್ ಅವರ ಬದುಕು–ಬರಹಗಳನ್ನು ಕುರಿತ ಪರಿಚಯವನ್ನು ಇಲ್ಲಿ ನೀಡಿದ್ದೇವೆ. ಶ್ರೀಮತಿ ಗಾಯತ್ರಿ ಮತ್ತು ಬಿ. ಎನ್. ಸುಮಿತ್ರಾಬಾಯಿ ಅವರು ನಡೆಸಿದ ಸಂದರ್ಶನವನ್ನು ಆಧರಿಸಿದ ಲೇಖನವಿದು.

1994ರ ಸಾಲಿನಲ್ಲಿ ನಂಜನಗೂಡು ತಿರುಮಲಾಂಬಾ–ಶಾಶ್ವತೀ ಪ್ರಶಸ್ತಿ ಪಡೆದುಕೊಂಡ ಶ್ರೀಮತಿ ರಾಜಂ ಕೃಷ್ಣನ್ ತಮಿಳಿನ ಅತಿ ವಿಶಿಷ್ಟ ಲೇಖಕಿಯರಲ್ಲಿ ಒಬ್ಬರು. ಸಾಹಿತ್ಯ ರಚನೆ, ಸಾಮಾಜಿಕ ಕಾರ್ಯಗಳೆರಡೂ ಒಟ್ಟೊಟ್ಟಿಗೆ ಸಾಗಬಲ್ಲದು ಎಂಬುದಕ್ಕೆ ಮಾದರಿಯ ಕತೆ ಅವರ ಬದುಕು ಬರಹಗಳಲ್ಲಿವೆ. ನಲವತ್ತೈದು ವರ್ಷಗಳ ತಮ್ಮ ಸಾಹಿತ್ಯಕ ಬದುಕಿನಲ್ಲಿ ಹಲವು ನೂರು ಸಣ್ಣ ಕಥೆಗಳು, ಸುಮಾರು 50 ಕಾದಂಬರಿಗಳು, 3 ಪೂರ್ಣ ಪ್ರಮಾಣದ ಜೀವನ ಚರಿತ್ರೆಗಳು, ಮಹಿಳಾ ಅಧ್ಯಯನಕ್ಕೆ ಸೇರಿದ ಎರಡು ಕೃತಿಗಳು, ಗಾಂಧೀತತ್ವ ವಿಚಾರವುಳ್ಳ ಒಂದುಗ್ರಂಥ, 20ಕ್ಕೂ ಹೆಚ್ಚು ರೇಡಿಯೊ ನಾಟಕಗಳು, ಮಕ್ಕಳ ಕಾದಂಬರಿಗಳು, ಪ್ರವಾಸಕಥನ ಮುಂತಾದುವನ್ನು ರಚಿಸಿದ್ದಾರೆ.

ಪ್ರಸಿದ್ಧ ವಿಮರ್ಶಕಿ ಪ್ರೇಮಾ ನಂದಕುಮಾರ್ ಅವರ ಪ್ರಕಾರ 'ಆಧುನಿಕ ಮಹಿಳೆಯ ಅಂತಸ್ಥ ಶಕ್ತಿಯನ್ನು ತೆರೆದು ತೋರಿಸುವ ಹಲವಾರು ಸಶಕ್ತ ಕಾದಂಬರಿಗಳನ್ನು' ರಾಜಂಕೃಷ್ಣನ್ ಚಿತ್ರಿಸಿದ್ದಾರೆ. 'ಮಹಿಳೆಯನ್ನು ಸದಾ ಅಬಲೆಯರು, ಸೋತವರೆಂದು ಚಿತ್ರಿಸುವ ಧೋರಣೆಯನ್ನು ಧಿಕ್ಕರಿಸಿ ಅನೇಕ ಸ್ಮರಣಾರ್ಹ ಸ್ತ್ರೀ ಪಾತ್ರಗಳನ್ನು ಚಿತ್ರಿಸಿದ್ದಾರೆ,' ಕೃತಿ ರಚನೆಗೆ ಮೊದಲು ಆಯಾ ಜನರ ಬದುಕಿನ ನೆಲೆಗೇ ಹೋಗಿ ವ್ಯಾಪಕ ಕ್ಷೇತ್ರ ಕಾರ್ಯ ನಡೆಸಿ, ಸಂಶೋಧನೆ ಮಾಹಿತಿ ಸಂಗ್ರಹ ನಡೆಸುವುದು ರಾಜಂ ರೂಪಿಸಿಕೊಂಡ ವಿಶಿಷ್ಟ ದಾರಿ. ಸಾಹಿತ್ಯದಲ್ಲಿ ಅವರು ಅನ್ವೇಷಕಿಯಾಗಿ ಕಾಳಜಿ ತೋರದ ಸಾಮಾಜಿಕ–ರಾಜಕೀಯ ವಸ್ತುಗಳೇ ಇಲ್ಲವೆನ್ನಬಹುದು. ಒಟ್ಟಾರೆ ಮಾನವ ಸಮಾಜದ ಸಮಗ್ರ ವಿಕಾಸಕ್ಕೆ ಮೂಲವಾದ ಮಹಿಳೆಯರ ಸ್ಥಾನ, ಘನತೆಗಳ ಬಗ್ಗೆ ಅವರದು ತೀವ್ರವಾದ ಕಳಕಳಿ.

**ಕತೆಗಾರ್ತಿಯ ಉದಯ :**

ರಾಜಂ ಕೃಷ್ಣನ್ ಹುಟ್ಟಿದ್ದು 1925ರ ನವೆಂಬರ್ 5ರಂದು ತಂದೆ ಯಜ್ಞನಾರಾಯಣ ಮತ್ತು ತಾಯಿ ಮೀನಾಕ್ಷಿ. ಮೊದಲ ತಲೆಮಾರಿನ ಕಾದಂಬರಿಕಾರರಲ್ಲಿ ಒಬ್ಬರೆಂದು ತಮಿಳು ಸಾಹಿತ್ಯದಲ್ಲಿ ಪ್ರಸಿದ್ಧರಾದ ಮಾಧವಯ್ಯನವರ ಮನೆತನಕ್ಕೆ ಸೇರಿದವರಾದ ಯಜ್ಞನಾರಾಯಣ ದೊಡ್ಡ ಸಂಸ್ಕೃತ ವಿದ್ವಾಂಸರು, ವೃತ್ತಿಯಿಂದ ಶಾಲಾ ಶಿಕ್ಷಕರು. ಮಗಳಿಗೂ ಉತ್ತಮ ಶಿಕ್ಷಣ ಕೊಡಿಸಿದ್ದರು. ತಮಿಳಿನಲ್ಲಿ ಹೆಚ್ಚು ಬಳಕೆಯಿಲ್ಲದಿದ್ದರೂ ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಚೆನ್ನಾದ ಅರಿವುಳ್ಳ ರಾಜಂ ಅವರು ಓದಿದ್ದು ಹತ್ತನೇ ತರಗತಿಯವರೆಗೆ.

1940ರ ಮಾರ್ಚ್ ತಿಂಗಳಲ್ಲಿ ಮುತ್ತು ಕೃಷ್ಣನ್ ಅವರೊಂದಿಗೆ ಮದುವೆಯಾದಾಗ ರಾಜಂಗೆ ಹದಿನೈದು ವರ್ಷ. ಅತ್ತೆ ಮನೆಯಾದರೋ ಆರು ಹೆಣ್ಣು ಮಕ್ಕಳು, ಮೂರು ಗಂಡು ಮಕ್ಕಳಿದ್ದ ತುಂಬಿದ ಕುಟುಂಬ. ಆ ಮಕ್ಕಳಲ್ಲಿ ಕೊನೆಯವರೇ ಮುತ್ತು ಕೃಷ್ಣನ್. ಹೀಗಾಗಿ ಆ ಕುಟುಂಬಕ್ಕೆ ಅತ್ಯಂತ ಕಿರಿಯ ಸೊಸೆಯಾಗಿ ಹೋದ ರಾಜಂಗೆ ಆ ಎಲ್ಲ ಹಿರಿಯರೆದುರಲ್ಲಿ ಮಾತನಾಡಲೂ ಅವಕಾಶವಿರಲಿಲ್ಲ. ಪುಸ್ತಕಗಳನ್ನು ತರುವುದು, ಓದು ವುದು ರೂಢಿಯಿರದ ಆ ಮನೆಗೆ ರಾಜಂ ಅವರನ್ನು ಕಳಿಸಿ ಕೊಡುವಾಗ ಅವರಜ್ಜಿ 'ಅತ್ತೆ ಮನೆಯಲ್ಲಿ ಪುಸ್ತಕ ಹಿಡಿದು ಕೂರಬೇಡ. ಹೆಣ್ಣು ಗಂಧದಂತೆ ಜೀವನ ತೇಯಬೇಕು' ಎಂದು ಬುದ್ಧಿ ಹೇಳಿದರು.

ಹುಟ್ಟು ಕತೆಗಾರ್ತಿಯ ಚೇತನ ರಾಜಂ ಅವರದು. ಎಲ್ಲ ನಿರ್ಬಂಧ, ಅಂಕೆಗಳ ಒಳಗೇ ಸ್ಫೂರ್ತಿ ಉಕ್ಕಿ ಬರುತ್ತಿತ್ತು. ಹೇಗಾದರೂ ತನ್ನನ್ನು ಅಭಿವ್ಯಕ್ತಿಸಿ ಕೊಳ್ಳಬೇಕಿತ್ತು. ಹಿರಿಯ ಅತ್ತಿಗೆಯರು ಓದುವುದ ಕ್ಕಾಗಿ ಅನೇಕ ಬಗೆಯ ಪತ್ರಿಕೆಗಳನ್ನು ತರುವುದಿತ್ತು. ಮನೆಗೆಲಸವೆಲ್ಲ ಮುಗಿದು, ಎಲ್ಲರೂ ಮಲಗಿದ ಮೇಲೆ ರಾತ್ರಿ ಹನ್ನೆರಡರ ನಂತರ ಆ ಪತ್ರಿಕೆಗಳನ್ನು ಗುಟ್ಟಾಗಿ ಓದತೊಡಗಿದರು. ಓದಿನಿಂದ ಅರಿವು ಬೆಳೆದಂತೆ, ತನ್ನ ಅನುಭವವನ್ನು ಬರೆಯಲು ಪ್ರೇರಣೆಯೂ ದೊರೆತಿತ್ತು ಆದರೆ ತನ್ನದಾಗಿ ಚಿಕ್ಕಾಸೂ ಇರದ ಪರಾವಲಂಬಿತ ಸ್ಥಿತಿ. ಹೆಣ್ಣು ಓದಿ ಬರೆದು ಮಾಡುವ ಬಗ್ಗೆ ಮನೆ ಜನರಲ್ಲಿ ಇದ್ದ ಉದಾಸೀನತೆ. ಅಂಥ ವಾತಾವರಣ ದಲ್ಲಿ ಹದಿನೈದು–ಹದಿನಾರರ ರಾಜಂಗೆ ಬರೆಯಲು ಪೇಪರು, ಪೆನ್ನು ದೊರೆಯುವುದಾದರೂ ಹೇಗೆ ? ಯಾರನ್ನು ತಾನೆ ಕೇಳಲು ಸಾಧ್ಯವಿತ್ತು ? ಜೊತೆಗೆ ಅಂಥಾದ್ದೆಲ್ಲ ಯಾರಿಗೂ ತಿಳಿಯಬಾರದು ಎಂಬ ಭಾವನೆ ಬೇರೆ. ಈ ಸ್ಥಿತಿಯಲ್ಲಿ ರೇಷನ್ನಿನ ಮೂಲಕ ಮನೆಗೆ ತರ ಲಾಗುತ್ತಿದ್ದ ಮಲ್ಲು ಬಟ್ಟೆ ಮಿಲ್ ಸೀರೆಗಳಿಗೆ ಹಚ್ಚಿರು ತ್ತಿದ್ದ ದೊಡ್ಡ ದೊಡ್ಡ ಬಿಲ್ಲು ಹಾಳೆಗಳನ್ನು ತೆಗೆದು ಜೋಡಿಸಿಟ್ಟುಕೊಂಡು ಮನೆಗೆ ಬರುತ್ತಿದ್ದ ಸಂಬಂಧಿಕ ಹುಡುಗ ಏಳನೇ ತರಗತಿಯ ವಿದ್ಯಾರ್ಥಿಯಿಂದ ಪೆನ್ನು ಆಗಾಗ್ಗೆ ಪಡೆದು ಕತೆಗಳನ್ನು ಬರೆಯತೊಡಗಿದರು ರಾಜಂ. ನಿಜವಾದ ಹೆಸರು ಮರೆಸಿ ಬೇರೆ ಅನೇಕ ಹೆಸರು ಗಳಲ್ಲಿ ಬರೆದ ಕತೆಗಳನ್ನು ತಮಿಳಿನ ಸುಪ್ರಸಿದ್ಧ ಲೇಖಕಿ ಕೊದೈನಾಯಕಿಯವರು ಹೊರಡಿಸುತ್ತಿದ್ದ 'ಜಗನ್ಮೋ ಹಿನಿ' ಪತ್ರಿಕೆಗೆ ಕಳಿಸುತ್ತಿದ್ದರು. ಆದರೆ ಮೊದಲು ಪ್ರಕಟವಾದದ್ದು ಆ ಪತ್ರಿಕೆಯಲ್ಲಲ್ಲ. 1944–45ರ ಸಮಯ ಅದು. ಇಂಡಿಯನ್ ವಿಮೆನ್ ಸಿವಿಲ್ ಕೋರ್ಟ್ ಹೊರಡಿಸುತ್ತಿದ್ದ ಪತ್ರಿಕೆಯೊಂದರಲ್ಲಿ ಶೇ. 80ರಷ್ಟು ಆಂಗ್ಲ ಲೇಖನಗಳು, 20ರಷ್ಟು ತಮಿಳು ಲೇಖನಗಳೂ ಇರುತ್ತಿದ್ದವು. 'ಲೇಖನಿ' ಎಂಬ ಹೆಸರಿ ನಿಂದ ರಾಜಂ ಬರೆದ ಇಂಗ್ಲಿಷ್ ಕತೆ ಆ ಪತ್ರಿಕೆಯಲ್ಲಿ ಪ್ರಕಟವಾದಾಗ, ತನ್ನದೇ ಕೃತಿಯನ್ನು ಮುದ್ರಿತ ರೂಪ ದಲ್ಲಿ ಕಂಡು ಎಷ್ಟು ಹಿಗ್ಗಿದರೋ ! ಆದರೆ ಆ ಹಿಗ್ಗನ್ನು ಯಾರೊಂದಿಗೂ ಹಂಚಿಕೊಳ್ಳುವಂತಿರಲಿಲ್ಲವಲ್ಲ. ಹಲ ವಾರು ಕಥೆಗಳು ಇಂಗ್ಲಿಷಿನಲ್ಲಿ ಆ ಪತ್ರಿಕೆಯಲ್ಲೇ ಪ್ರಕಟ ವಾದ ಮೇಲೆ ಆ ಸಂಸ್ಥೆಯವರು ಯಾರು ಈ ಕತೆಗಾರ್ತಿ ಎಂದು ನೋಡಲು ಬಯಸಿದರು. ಅವರ ಕರೆಯನ್ನು ತಿಳಿಸಿದ ಗೆಳತಿ, ವಾರ್ಷಿಕೋತ್ಸವದ ಸಮಾರಂಭಕ್ಕೆ ವಯೋಲಿನ್ ನುಡಿಸಲು ಇವರನ್ನು ಕಳಿಸಿ ಎಂದು ರಾಜಂ ಅವರ ಅತ್ತೆಯವರಿಂದ ಅನುಮತಿ ಪಡೆದು ಕರೆದೊ ಯ್ದಳು. ಆ ಪತ್ರಿಕೆಯವರು ರಾಜಂ ಕಥೆಗಳ ಬಗ್ಗೆ ತಮ್ಮ ಮೆಚ್ಚುಗೆ ತಿಳಿಸಿದಾಗ 'ನಾನು ತಮಿಳಿನಲ್ಲೂ ಬರೆಯಲೆ ?' ಎಂದು ಇವರು ಕೇಳಿದರು. 'ಧಾರಾಳ ವಾಗಿ' ಎಂದವರು ಬೆಂಬಲಿಸಿದ್ದರಿಂದ, ರಾಜಂ ತಮಿಳಿ ನಲ್ಲೂ ಕಥೆಗಳು ಬರೆದು ಕಳಿಸತೊಡಗಿದರು. 1945–46ರ ಅವಧಿಯಲ್ಲಿ ಇವರ ಅನೇಕ ಸಣ್ಣ ಕಥೆಗಳು ಆ ಪತ್ರಿಕೆಯಲ್ಲಿ ಪ್ರಕಟವಾಗಿದ್ದವು.

ಅದರಿಂದ ಆತ್ಮ ವಿಶ್ವಾಸ ಹೆಚ್ಚಿ, 'ಕಲ್ಕಿ, 'ಆನಂದ ವಿಗಡನ್' ಮುಂತಾದ ಜನಪ್ರಿಯ ತಮಿಳು ಪತ್ರಿಕೆಗಳಿಗೂ ಕಥೆಗಳನ್ನೇನೋ ಬರೆದು ಕಳಿಸು ತ್ತಿದ್ದರು. ಅವು ಪ್ರಕಟವೂ ಆಗಲಿಲ್ಲ, ಹಿಂದಿರುಗುತ್ತಲೂ ಇರಲಿಲ್ಲ. ಎಲ್ಲ ಪತ್ರಿಕೆಗಳವರೂ ಕಥಾ ಸ್ಪರ್ಧೆಗಳನ್ನು ಏರ್ಪಡಿಸುವ ಭರಾಟೆಯಿತ್ತು. ಅಂಥ ಸ್ಪರ್ಧೆಗಳಿಗೆ 3–4 ಕಥೆಗಳನ್ನು ಬೇರೆ ಬೇರೆ ಹೆಸರುಗಳಲ್ಲಿ ರಾಜಂ ಅವರು ಆ ಪತ್ರಿಕೆಗಳಿಗೆ ಕಳಿಸುತ್ತಿದ್ದರು. ಕೊನೆಗೊಮ್ಮೆ ಈ ರೀತಿ ಕಳಿಸಿದ್ದ ಕಥೆಯೊಂದು 'ಕಲ್ಕಿ' ಪತ್ರಿಕೆಯಲ್ಲಿ ಪ್ರಕಟವಾಗಲು ಆಯ್ಕೆಯಾದ ಸುದ್ದಿ ಒಂದು ಪೋಸ್ಟ್ ಕಾರ್ಡಿನಲ್ಲಿ (ಇವರು ಕೊಟ್ಟಿದ್ದ) ತಂದೆ ಮನೆ ವಿಳಾಸಕ್ಕೆ ಬಂದಾಗ ತನ್ನದೇ ಹೆಸರಿನಲ್ಲಿದ್ದ ಕಥೆಯೇ ಪ್ರಕಟವಾದಷ್ಟು ಹಿಗ್ಗು ರಾಜಂ ಅವರಿಗೆ. ಆ ಮೊದಲ ಕಥೆ 'ವೆಳ್ಳಿಮಣಿ' (ಬೆಳ್ಳಿ ಬಟ್ಟಲು) ಪ್ರಕಟವಾಗಿ, ಅದಕ್ಕಾಗಿ ಹತ್ತು ರೂ. ಗೌರವ ಧನವೂ ರಾಜಂಗೆ ತಲುಪಿತು. ಆಗ ಮನೆಯಲ್ಲಿ ಅತ್ತೆ–ಅತ್ತಿಗೆಯಾದಿಯಾಗಿ ಎಲ್ಲರಿಗೂ ವಿಷಯ ತಿಳಿದು

ಆಶ್ಚರ್ಯ ! 'ಏನೇ ನೀನು ಕತೆ ಬರೀತಿಯಾ ! ಖರ್ಚಿಗೆಲ್ಲ ಹೇಗೆ ?' ಎಂದು ಅತ್ತೆ ಕೇಳಿದ್ದರು, ಆವರೆಗಿನ ಅನುಭವದಿಂದ ಹೆಣ್ಣಿಗೆ ಯಾವಾಗಲೂ ಆರ್ಥಿಕ ಸ್ವಾವಲಂಬನೆ ಇರಲೇ ಬೇಕು ಎಂಬ ನಂಬಿಕೆ ರಾಜಂ ಅವರಲ್ಲಿ ಬೆಳೆದಿತ್ತು. ಮುಂದೆ ಯಾವಾಗಲೂ ಅವರು ಅದನ್ನು ಎತ್ತಿಹಿಡಿದಿದ್ದಾರೆ. 'ಆರ್ಥಿಕ ಸ್ವಾತಂತ್ರ್ಯವಿದ್ದರೇ ನಮಗೆ ಒಂದು ವ್ಯಕ್ತಿತ್ವ, ಆತ್ಮವಿಶ್ವಾಸ ಬೆಳೆಯುತ್ತದೆ' ಎಂಬುದು ಅವರ ಖಚಿತವಾದ ನಿಲುವು. ಹೀಗೆ ಮನೆಯವರು ರಾಜಂ ಒಳಗಿದ್ದ ಬರಹಗಾರ್ತಿಯನ್ನು ಗುರುತಿಸಿ, ಸ್ವೀಕರಿಸಿದರು. ಅವರು ಏನೇ ಬರೆಯಲಿ, ಮಾಡಲಿ, ಪತಿಯವರಿಂದ ಮಾತ್ರ ಯಾವತ್ತೂ ಯಾವುದೇ ಅಡ್ಡಿ ವಿರೋಧಗಳಿರಲಿಲ್ಲ ಎಂಬುದನ್ನು ರಾಜಂ ತುಂಬ ಹಾರ್ದಿಕವಾಗಿ ನೆನೆಯುತ್ತಾರೆ.

ಕೃಷ್ಣನ್ ಅವರ ವೃತ್ತಿಕ್ಷೇತ್ರವೂ ಬೇರೆಯದು, ವಿದ್ಯುಚ್ಛಕ್ತಿ ಬೋರ್ಡಿನಲ್ಲಿ ಅವರು ಎಂಜಿನಿಯರ್ ಆಗಿದ್ದು, ಪತ್ನಿಯ ಬರಹದ ಬಗ್ಗೆ ನೇರವಾದ ಆಸಕ್ತಿ ತೋರುವಷ್ಟು ಬಿಡುವು ಅವರಿಗಿರಲೂ ಇಲ್ಲ. 'ಆಪರೇಷನ್ ಮೇಯ್ನ್ಟನೆನ್ಸ್' ಎಂಬ ಯೋಜನೆಗೆ ಅವರನ್ನು ನೇಮಕ ಮಾಡಿದ ನಂತರ ಅವರು ಕಾರ್ಯನಿಮಿತ್ತ ದೂರ ಉಳಿಯುವುದೂ ಇತ್ತು. ಆಗೆಲ್ಲ ಬರಹಗಾರರಳಾಗುವುದರತ್ತ ಹೆಚ್ಚು ಶ್ರಮವಹಿಸಲು ಅಗತ್ಯ ವಿರಾಮ ರಾಜಂಗೆ ದೊರೆಯುತ್ತಿತ್ತು. ಮುಂದೆ ಅವರಿಗೆ ಊಟಿಗೆ ವರ್ಗವಾಯಿತು. ಅಲ್ಲಂತೂ ವಿಶಾಲವಾದ ನೀಲಗಿರಿ ಪುಸ್ತಕ ಭಂಡಾರದಂಥ ದೊಡ್ಡ ಗ್ರಂಥಾಲಯಗಳಿದ್ದು, ಬೇಕಾದಷ್ಟು ಓದಿಕೊಳ್ಳಲು ಸಂಶೋಧನೆ ನಡೆಸಲೂ ಅವಕಾಶ ಅವರಿಗೆ ತೆರೆಯಿತು. ಸ್ವಂತದ ವಿಕಾಸಕ್ಕೆ ಇದು ತುಂಬಾ ನೆರವಾಯಿತು.

ಊಟಿಯಲ್ಲಿ ಇವರಿದ್ದ ಕಾಲದಲ್ಲೇ (1950) ನ್ಯೂಯಾರ್ಕ್ ಹೆರಾಲ್ಡ್ ಟೈಮ್ಸ್ ಪತ್ರಿಕೆಯು ಏರ್ಪಡಿಸಿದ್ದ ಅಂತರ ರಾಷ್ಟ್ರೀಯ ಕಥಾಸ್ಪರ್ಧೆಗಾಗಿ ಒಂದು ಕಥೆಯನ್ನು ಕಳಿಸಿಕೊಡಲೆಂದು 'ಕಲ್ಕಿ' ಪತ್ರಿಕೆಯವರು ರಾಜಂ ಅವರನ್ನು ಕೋರಿದ್ದರು. 'ಊಸಿಯುಂ ಉಣರ್‌ವುಮ್' (ಸೂಜಿ ಮತ್ತು ಸೂಕ್ಷ್ಮತೆ) ಎಂಬ ತಮ್ಮ ಕಥೆಯನ್ನು ತಾವೇ ಇಂಗ್ಲೀಷಿಗೆ ಅನುವಾದಿಸಿ ಕಳಿಸಿದರು. ಆ ಕಥೆ ಸ್ಪರ್ಧೆಯಲ್ಲಿ ಬಹುಮಾನ ಗಳಿಸಿತಲ್ಲದೆ ಹಿಂದೂಸ್ತಾನ್ ಟೈಮ್ಸ್‌ನವರು 'International Short Stories' ಎಂಬ ಸಂಕಲನದಲ್ಲಿ ಅದನ್ನು ಪ್ರಕಟಿಸಿದರು (1952). ಮುಂದೆ ಮೊಸ್ಕೋಗೆ ಭೇಟಿಕೊಡುವ ಕಾಲಕ್ಕೆ ರಾಜಂ ಅವರಿಗೆ ತಮ್ಮ ಆ ಕಥೆ ರಷ್ಯನ್ ಭಾಷೆಗೂ ಅನುವಾದಗೊಂಡಿದ್ದುದು ತಿಳಿದು ತುಂಬ ಆಶ್ಚರ್ಯವೆನಿಸಿತ್ತು. ನೀಲಗಿರಿಯಲ್ಲಿದ್ದ ಅವಧಿಯಲ್ಲೇ ಅಲ್ಲಿನ ತೋಟಗಳ ಕಾರ್ಮಿಕರ ಬುಡಕಟ್ಟು ಜನರ ಬದುಕಿನ ನೋಟ ಒದಗಿತ್ತು, ಆ ಜನರ ಸಂಪರ್ಕ, ಅವರ ಬದುಕಿನ ವಿವರ ಸಂಗ್ರಹಣೆ ನಡೆಸಿದರು. ಅದರ ಫಲವಾಗಿ "ಕುರಿಂಜಿ ತೇನ್" (ಕುರಿಂಜಿ ಹೂವಿನ ಮಧು) ಎಂಬ ಕಾದಂಬರಿಯನ್ನು ಅವರು ರಚಿಸಿದರು. ಕೈಗಾರಿಕೋದ್ಯಮಗಳ ತೀವ್ರ ಬೆಳವಣಿಗೆಗಳ ಫಲವಾಗಿ ನೀಲಗಿರಿಯ ಆದಿನಿವಾಸಿಗಳ ಬದುಕಿನಲ್ಲಿ ಉಂಟಾದ ಬದಲಾವಣೆಗಳು ಸಂದುಹೋದ ಬದುಕಿನ ವಿಧಾನ ಈ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ.

**ವಿಶಿಷ್ಟ ಕಥನ ವಿಧಾನ, ಸ್ವಂತದ ಹಾದಿಯತ್ತ :-**

ತಮಿಳುನಾಡಿನ ಅಂದಿನ ಕಥಾ ಸಾಹಿತ್ಯದ ವಿಶೇಷತೆ ಎಂದರೆ ಆ ಸಾಹಿತ್ಯದ ಪ್ರಮುಖ ಸೆಲೆಗಳು ಜನಪ್ರಿಯ ಪತ್ರಿಕೆಗಳೇ. ನೆರೆಯ ಮಲೆಯಾಳಂ, ಕನ್ನಡ ಭಾಷೆಗಳಲ್ಲಿರುವಂತೆ ಪುಸ್ತಕ ಸಂಸ್ಕೃತಿ 'ಕಥಾ ಸಾಹಿತ್ಯ'ದ ಸಂದರ್ಭದಲ್ಲಿ ತಮಿಳುನಾಡಿನಲ್ಲಿ ಬೆಳೆಯಲಿಲ್ಲ. ಬರಹಗಾರರೆಲ್ಲ ಮುಖ್ಯವೂ ಜನಪ್ರಿಯವೂ ಆದ ಪತ್ರಿಕೆಗಳಿಗೆ ಬರೆದು ಅವುಗಳ (ತೊಡರ್ ಕಥೈ) ಧಾರವಾಹಿಗಳ ಮೂಲಕವೇ ತಾವು ಜನಪ್ರಿಯರಾಗುವ ಹಂಬಲದವರಾಗಿರುತ್ತಿದ್ದರು. ಅಂಥ ಪರಿಸರದಲ್ಲಿ ರಾಜಂ ಕೃಷ್ಣನ್ ಈ ಪ್ರವಾಹದೊಂದಿಗೆ ಸಾಗದೆ ತಮ್ಮದೇ ಆದ ದಾರಿಯನ್ನು ಕಂಡುಕೊಂಡದ್ದು ವಿಶೇಷ ಸಂಗತಿಯಾಗಿದೆ.

ತಮ್ಮ ಕಥೆ, ಕಾದಂಬರಿಗಳಿಗೆ ನಾಡಿನ ವಿವಿಧ ಜನರ. ಜನಾಂಗಗಳ ಜೀವನದ ಸಾಂಸ್ಕೃತಿಕ ಅಧ್ಯಯನ, ಸಂಶೋಧನೆ ನಡೆಸಿ, ಸಮಗ್ರ ಮಾಹಿತಿ ಸಂಗ್ರಹಿಸಿದ ನಂತರವೇ ಅವರು ಬರವಣಿಗೆಗೆ ತೊಡಗುತ್ತಾರೆ. ಜನಜೀವನದ ಗಹನವಾದ ಸಮಸ್ಯೆಗಳನ್ನು ಆಯಾ ಜನಗಳ ಸ್ಥಳದಲ್ಲೇ ಎಲ್ಲ ವಾಸ್ತವತೆಯೊಂದಿಗೆ ಅಭ್ಯಸಿಸಿ, ಮಾನವೀಯ ಮೌಲ್ಯದ ಚರ್ಚೆಗೆ ಅವರ ಕೃತಿಗಳಲ್ಲಿ ಯತ್ನಿಸುತ್ತಾರೆ. ಈ ದಾರಿಯನ್ನು ರಾಜಂ ಅವರು ಗುರುತಿಸಿಕೊಂಡ ಸಂದರ್ಭಕೂಡ ಕುತೂಹಲಕರವಾಗಿದೆ.

ಬ್ರಾಹ್ಮಣೇತರ ಜಾತಿಗಳವರು ನಡೆಸುತ್ತಿದ್ದ ದ್ರಾವಿಡ ಚಳವಳಿ ತಮಿಳು ನಾಡಿನ ರಾಜಕೀಯ, ಸಾಮಾಜಿಕ, ಪತ್ರಿಕೋದ್ಯಮ, ಚಲನಚಿತ್ರಾದಿ ಎಲ್ಲ ಕ್ಷೇತ್ರಗಳಲ್ಲೂ ವ್ಯಾಪಿಸಿದ್ದಾಗ ಸಾಹಿತ್ಯ ಕ್ಷೇತ್ರವೇನೂ ಅದರ ಪ್ರಭಾವದಿಂದ ದೂರವುಳಿಯಲು ಸಾಧ್ಯವಿರಲಿಲ್ಲ.

ಈ ಅವಧಿಯಲ್ಲಿ ಕಲ್ಕಿ ಪತ್ರಿಕೆಯವರು ಧಾರಾವಾಹಿಯಾಗಿ ಪ್ರಕಟಿಸಲು, ಕಾದಂಬರಿಯೊಂದನ್ನು ಕೋರಿದ್ದರು. ಗಂಭೀರ ಲೇಖಕರಿಗೂ, ಜನಪ್ರಿಯ ಲೇಖಕರಿಗೂ, ವ್ಯತ್ಯಾಸವೇನನ್ನೂ ಕಾಣದ ಆ ಪತ್ರಿಕೆ 'ಮೊದಲು ಒಂದೆರಡು ಅಧ್ಯಾಯ ಬರೆದು ಕೊಟ್ಟುಬಿಡಿ, ನಾವು ಪ್ರಕಟಿಸಿದಂತೆಲ್ಲಾ ಮುಂದಿನದನ್ನು ಬರೆದುಕೊಡುವಿರಂತೆ' ಎಂದೂ ಆಗ್ರಹಪಡಿಸಿದ್ದರು. ಶಿಸ್ತಿನಿಂದ ಬರೆಯುವ ರಾಜಂ ಅವರಿಗೆ ಈ ಧೋರಣೆ ಒಪ್ಪದಾಗಿತ್ತು. ಪೂರ್ಣವಾಗಿಯೇ ಅವರು ಕೊನೆಗೊಮ್ಮೆ ಕಾದಂಬರಿಯನ್ನು ಆ ಪತ್ರಿಕೆಗೆ ನೀಡಿದರು. ಆದರೆ ಪತ್ರಿಕೆಯಿಂದ ಮತ್ತೆ ಆಕ್ಷೇಪ ; ''ನೀವು ಬರೀ ಬ್ರಾಹ್ಮಣರ ಬಗ್ಗೆ ಅವರ ಜೀವನ ಪಾತ್ರಗಳನ್ನು ಮಾತ್ರ ಇಟ್ಟುಕೊಂಡು ಬರೆದಿದ್ದೀರಿ. ಈ ಎಲ್ಲ ಬ್ರಾಹ್ಮಣ ಪಾತ್ರಗಳ ಹೆಸರನ್ನು ಅಬ್ರಾಹ್ಮಣ ಹೆಸರುಗಳಾಗಿ ಬದಲಾಯಿಸಿಕೊಡಿ" ಎಂದು. ಇದು ಮಾತ್ರ ತಮ್ಮಿಂದ ಸಾಧ್ಯವಿಲ್ಲ ಎಂದು ತೀವ್ರವಾಗಿ ನಿರಾಕರಿಸಿದ ರಾಜಂಅವರು ಆ ಪತ್ರಿಕೆಯಿಂದ ತಮ್ಮ ಹಸ್ತಪ್ರತಿಯನ್ನೇ ಹಿಂದಕ್ಕೆ ಪಡೆದರು. ಒತ್ತಡಗಳಿಗೆ ಅವರು ಮಣಿಯಲಿಲ್ಲ ಆದರೆ ಮುಂದೆ ಸಮಾಜದ ಎಲ್ಲ ಜಾತಿ, ವರ್ಗಗಳ ಜನರ ಬಗ್ಗೆ ತೆರೆದ ಮನದಿಂದ ಅಭ್ಯಾಸ ಮಾಡುವ, ಆಯಾ ಜನರ ಅನುಭವದ ಸಹಜತೆಯನ್ನು ಕೃತಿಗಳಲ್ಲಿ ಸೆರೆ ಹಿಡಿಯುವ ವಿಶಿಷ್ಟ ವಿಧಾನವೊಂದನ್ನು ಅವರು ರೂಢಿಸಿಕೊಳ್ಳಲು ಈ ಘಟನೆ ಕಾರಣವಾಯಿತು.

**ಸಾಮಾಜಿಕ ಎಚ್ಚರದ ಮನ, ಪ್ರಾಮಾಣಿಕ ಬರಹ**

ರಾಜಂ ಅವರು ಕಾದಂಬರಿಗೆ ವಸ್ತುಗಳನ್ನು ಹುಡುಕಲೆಂದಷ್ಟೇ ಜನಸಾಮಾನ್ಯರ ಬಳಿಗೆ ಹೋದದ್ದಲ್ಲ, ಪ್ರಾರಂಭದಿಂದಲೂ ಅವರಲ್ಲಿ ಸಾಮಾಜಿಕ ಪ್ರಜ್ಞೆ ತೀವ್ರವಾಗಿತ್ತು. ಅನೇಕ ಮಹಿಳಾ ಸಂಘಟನೆಗಳು, ಪ್ರಗತಿಪರ ಬರಹಗಾರರ ಸಂಘಗಳೊಂದಿಗೆ ಅವರು ನಿಕಟ ಸಂಬಂಧ ಪಡೆದುಕೊಂಡವರು. ಸುಮಾರು ಇಪ್ಪತ್ತೈದು ಮೂವತ್ತು ವರ್ಷಗಳ ಹಿಂದೆಯೇ ರೈತ ಕಾರ್ಮಿಕರ, ಕಾರ್ಖಾನೆ ದುಡಿಮೆಗಾರರ ಮಕ್ಕಳಿಗೆ ಅಕ್ಷರಾಭ್ಯಾಸ, ಶಿಕ್ಷಣಗಳನ್ನು ನೀಡುವ ಸುಧಾರಣಾ ಯತ್ನಗಳಲ್ಲಿ ತಮ್ಮನ್ನು ಅವರು ತೊಡಗಿಸಿಕೊಂಡವರು. ಇಂದಿಗೂ ಸಾಕ್ಷರತಾ ಆಂದೋಲನದಲ್ಲಿ ಸೇರಿರುವವರು. ದುಡಿಯುವ ಜನರ ಹೆಣ್ಣು ಮಕ್ಕಳಿಗೆ ಕಲಿಸಲು ಇವರು ನಡೆಸಿದ ಯತ್ನ ಹಲವು ರೀತಿಯದು. ತಂದೆ–ತಾಯಿಗಳಿಬ್ಬರೂ ಕೂಲಿಗೆ ಹೋಗಿದ್ದಾಗ ಮಧ್ಯಾಹ್ನದ ವೇಳೆಯಲ್ಲಿ ಅವರ ಮಕ್ಕಳನ್ನು ಮನೆಗೆ ಬರಮಾಡಿಕೊಂಡು ಅವರಿಗಾಗಿ ಸ್ಲೇಟು, ಪುಸ್ತಕ, ಬಳಪ ಮುಂತಾದ ಸಲಕರಣೆಗಳನ್ನು ಕೊಂಡುತಂದು ಕಲಿಸಲು ಹೊರಟಾಗ ಆರ್ಥಿಕ ಮೂಲದಿಂದ ಹುಟ್ಟುವ ಎಷ್ಟೋ ಸಮಸ್ಯೆಗಳು ಎದುರಾದವು. ಒಮ್ಮೆ ಹುಡುಗಿಯೊಬ್ಬಳು ರಾತ್ರಿಯೆಲ್ಲ ನಿದ್ದೆ ಇಲ್ಲವಮ್ಮಾ, ಕಾಲು ತುಂಬಾ ನೋಯುತ್ತದವಮ್ಮಾ ಎಂದಳು. ಪರೀಕ್ಷಿಸಿ, ವಿಚಾರಿಸಲಾಗಿ ಆ ಹುಡುಗಿ 3–4 ತಿಂಗಳಿಂದ ವಾಷಿಂಗ್ ಸೋಡಾ ನೀರು ತುಂಬಿಸಿದ್ದ ಕೊಠಡಿಯಲ್ಲಿ ನಿಂತು ಕೆಲಸ ಮಾಡುತ್ತಿದ್ದುದು ತಿಳಿಯಿತು. ಸೋಡಾದಿಂದ ಚರ್ಮವೆಲ್ಲಾ ಬಿರಿದು ಗಾಯವಾಗಿ, ನೋವಿನಿಂದ ನರಳುತ್ತಿದ್ದ ಹುಡುಗಿಗೆ ಅಕ್ಷರಾಭ್ಯಾಸಕ್ಕಿಂತ ವೈದ್ಯರಿಂದ ಚಿಕಿತ್ಸೆ ಕೊಡಿಸಬೇಕಾದ್ದು ಮೊದಲು ಅಗತ್ಯ ಎಂದು ಅರಿವಾಯಿತು. ಇದೇ ರೀತಿ ಎಷ್ಟೋ ಬಡ ಜನರ ಸಮಸ್ಯೆಗಳಿಗೆ ತೆರೆದುಕೊಳ್ಳುತ್ತಿದ್ದರು. ತಮ್ಮನ್ನು ಪ್ರೀತಿಯಿಂದ ವಿಚಾರಿಸಿ, ಕಳಕಳಿ ತೋರಿ ಗಮನ ಕೊಡುವ ಇವರ ವರ್ತನೆ ಆ ಮಕ್ಕಳು ಕಂಡರಿಯದಂಥದು. ಹೆಣ್ಣು ಮಕ್ಕಳೆಂದು ಸದಾ ತಾತ್ಸಾರ, ಭತ್ಸನೆ, ನಿರ್ಲಕ್ಷ್ಯಗಳಿಂದಷ್ಟೇ ನೋಡುವ ಕುಟುಂಬಗಳಿಂದ ಬಂದ ಅವರು 'ಅಮ್ಮ ಇಂದು ನನ್ನನ್ನು ವಿಚಾರಿಸಿದರು' 'ಅಮ್ಮ ನನ್ನನ್ನು ತುಂಬ ಪ್ರೀತಿಸುತ್ತಾರೆ' ಎಂದು ಹೆಮ್ಮೆಯಿಂದ ಮಾತಾಡಿಕೊಳ್ಳುವುದಿತ್ತು.

ಒಮ್ಮೆ ಹುಡುಗಿಯೊಬ್ಬಳಿಗೆ 'ಕಡಲು' ಎಂಬ ಶಬ್ದವನ್ನು ಕಲಿಸುತ್ತಿದ್ದಾಗ ಅವಳು 'ಹಾಗೆಂದರೇನಮ್ಮಾ ?' ಎಂದು ಕೇಳಿದಳು. 'ಕಡಲು–ಸಮುದ್ರ ನಿನಗೆ ಗೊತ್ತಿಲ್ಲವೆ.' ಮದರಾಸಿನಲ್ಲೇ ಇದ್ದೀ ಎಂದೂ ಬೀಚು ನೋಡಿಲ್ಲವೆ ?' ಎಂದರೆ ಅವಳು 'ನನ್ನ ತಮ್ಮ ಅದನ್ನೆಲ್ಲಾ ನೋಡಿದ್ದಾನಮ್ಮ, ನನಗೆ ಗೊತ್ತಿಲ್ಲ' ಎಂದಳು. ಈ ಘಟನೆಯಿಂದಾಗಿ ರಾಜಂ ತಾನೇ ಒಂದು ವಾಹನವನ್ನು ಗೊತ್ತು ಮಾಡಿ ಸುಮಾರು ಇಪ್ಪತ್ತು ಹುಡುಗಿಯರನ್ನು ಕರೆದುಕೊಂಡು, ಮದರಾಸಿನಲ್ಲಿದ್ದ ಎಲ್ಲ ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸಿದ್ದರು. ಅವರೆಗೆ ಕೇವಲ ಪುಸ್ತಕದ ಪದಗಳಾಗಿದ್ದ ಸ್ಥಳಗಳೆಲ್ಲ ಈಗ ಕಣ್ಣೆದುರು ಜೀವಂತರಾಗಿ ಕಾಣುವಂತಾದಾಗ ಆ ಮಕ್ಕಳಿಗೆ ಹಿಗ್ಗೋ ಹಿಗ್ಗು ! ಇಂಥ ಅನುಭವಗಳು ಇದ್ದರೂ, ಆ ಮಕ್ಕಳ ತಾಯ್ತಂದೆಗಳು ಬಂದು ದೊಡ್ಡದಾಗಿ ವಿರೋಧಿಸಿದರು. 'ಎಲ್ಲೋ ಇವರು ಕೆಲಸಕ್ಕೆ ಹೋಗುತ್ತಾರೆಂದು ನಾವು ಅಂದುಕೊಂಡಿದ್ದೆವು.

ನೋಡಿದರೆ ಇಲ್ಲಿ ಕರೆತಂದು ನೀವು ಓದು ಕಲಿಸುತ್ತೀರಾ? ಕಲಿತರೆ ಈ ಹೆಣ್ಣುಗಳಿಗೆ ಕೊಬ್ಬು ತಲೆಗೇರದೆ ? ಇವರಿಗೆ ನಾವೆಲ್ಲಿ ಗಂಡು ಹುಡುಕೋಣ 'ಮುಂತಾಗಿ ನೆಪವೊಡ್ಡಿ, ತಮ್ಮ ಮಕ್ಕಳನ್ನು ಓದಲು ಕಳಿಸುವುದನ್ನೇ ತಪ್ಪಿಸಿದರು. ಹೀಗಾಗಿ ತಾವು ಮಾಡಿದ ಈ ಪ್ರಯತ್ನಗಳಿಂದ ಆದ ದೊಡ್ಡ ಸಾಧನೆಯೆಂದರೆ 'ಕಣ್ಗಳ್' ಎಂಬ ಕಾದಂಬರಿಗೆ ಬೇಕಾದಷ್ಟು ಅನುಭವ ದ್ರವ್ಯ ಗಳಿಸಿದ್ದು ಅಷ್ಟೆ- ಎಂದು ರಾಜಂ ನುಡಿಯುತ್ತಾರೆ. ಹಾಗಿದ್ದರೂ ಇಂದು ಬಹುದೊಡ್ಡ ಅಬ್ಬರದ ಪ್ರಚಾರದೊಂದಿಗೆ ಹುಟ್ಟಿ ಕೊಂಡಿರುವ ಸಾಕ್ಷರತಾ ಆಂದೋಲನವು ಯಶಸ್ವಿಯಾಗು ವುದಕ್ಕೆ ಇಂದಿನ ಪರಿಸರವೇ ದೊಡ್ಡ ಅಡ್ಡಿಯಾಗಿದೆ ಎಂದು ಅವರು ವಿಶ್ಲೇಷಿಸುತ್ತಾರೆ. ನಿರಕ್ಷರಸ್ಥ ದುಡಿವ ಜನರು ಇಂದು ಆ ಕಾಲಕ್ಕಿಂತ ಹೆಚ್ಚು ತೀವ್ರವಾದ ಆರ್ಥಿಕ ರಾಜಕೀಯ–ಸಾಮಾಜಿಕ ಒತ್ತಡಗಳಿಗೆ ಬಲಿ ಯಾಗಿದ್ದಾರೆ ತಮ್ಮ–ಕಾಲ, ದುಡಿಮೆ, ಎಲ್ಲವನ್ನೂ ಹಣದ ಲಾಭದ ದೃಷ್ಟಿಯಿಂದಲೇ ಅವರು ಅಳೆಯು ತ್ತಾರೆ. ಓದು–ಬರಹಗಳು ಅವರ ದೃಷ್ಟಿಯಲ್ಲಿ ಕೇವಲ 'ಕಾಲಹರಣ'ವಾಗಿ ತೋರುತ್ತವೆ. ಅದೇ ವೇಳೆಯಲ್ಲಿ ದುಡಿದರೆ ತಾವೂ ತಮ್ಮ ಮನೆಯವರು ಇನ್ನಷ್ಟು ಗಳಿಸ ಬಹುದಲ್ಲಾ ಎಂಬುದು ಅವರ ಲೆಕ್ಕಾಚಾರ' ಎಂದು ತಮ್ಮ ಅನುಭವಜನ್ಯವಾದ ವಾಸ್ತವವನ್ನು ಹೇಳು ತ್ತಾರೆ ರಾಜಂ.

ಸಾಮಾಜಿಕ ಪ್ರಜ್ಞೆಯುಳ್ಳ ಮಹಿಳೆಯಾದ ರಾಜಂ ಕೃಷ್ಣನ್, ಎಡಪಂಥೀಯ ಮಹಿಳಾ ಸಂಘಟನೆ ಗಳೊಂದಿಗೆ, ಪ್ರಗತಿಪರ ಬರಹಗಾರರ ಸಂಘಗಳೊಂದಿಗೆ ತಮನ್ನು ತೊಡಗಿಸಿಕೊಂಡಿದ್ದುದರ ಫಲವಾಗಿ 1976ರಲ್ಲಿ ಮತ್ತು 1979ರಲ್ಲಿ ಸೋವಿಯತ್ ಪ್ರವಾಸ ರಷ್ಯಾದಲ್ಲಿ ಮಾಡುವ ಅವಕಾಶವನ್ನು ಪಡೆದಿದ್ದರು. 1983ರಲ್ಲಿ ಪ್ರಾಗ್‌ನಲ್ಲಿ ನಡೆದ ಜಾಗತಿಕ ಶಾಂತಿ ಸಮ್ಮೇಳನದಲ್ಲೂ ಪ್ರತಿನಿಧಿಯಾಗಿ ಪಾಲ್ಗೊಂಡಿದ್ದರು. 1980ರ ಮಾರ್ಚ್ ನಲ್ಲಿ ಶ್ರೀಲಂಕಾದಲ್ಲಿ ಜರುಗಿದ ಮಹಾಕವಿ ಸುಬ್ರಮಣ್ಯ ಭಾರತಿ ಶತಮಾನೋತ್ಸವದಲ್ಲೂ ಆಹ್ವಾನಿತರಾಗಿ ಭಾಗ ವಹಿಸಿದ್ದರು. ದೇಶಾದ್ಯಂತ ವ್ಯಾಪಕವಾಗಿ ಪ್ರವಾಸ ನಡೆಸಿರುವ ಅವರು ಅನೇಕ ಸಮ್ಮೇಳನ, ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿದ್ದಾರೆ, ಪ್ರಬಂಧಗಳನ್ನು ಮಂಡಿಸಿದ್ದಾರೆ. ಅವರು NFIWನ ಅಖಿಲ ಭಾರತ ಉಪಾಧ್ಯಕ್ಷೆಯಾಗಿಯೂ ಕೆಲಸ ಮಾಡಿದ್ದಾರೆ.

## ಪ್ರಶಸ್ತಿ ವಿಜೇತ ಕೃತಿಗಳು :-

1. 'ಊಸಿಯುಂ ಉಣರುವುವ್' ಅಂತರ ರಾಷ್ಟ್ರೀಯ ಕಥಾ ಸ್ಪರ್ಧೆಯಲ್ಲಿ ಬಹುಮಾನ ಗಳಿಸಿದ ಕಥೆ.
(International Short Stories : Published by Hindustan Times, 1952 )

2. ಪೆಣ್ ಕುರಲ್ (ಹೆಣ್ಣಿನ ದನಿ)–1953ರಲ್ಲಿ ರಚಿತವಾಗಿದ್ದು, ಕಲೈಮಗಳ್ ನಾರಾಯಣ ಸ್ವಾಮಿ ಐಯ್ಯರ್ ಪ್ರಶಸ್ತಿ ದೊರೆತ ಕೃತಿ.

3. 'ಮಲರ್‌ಗಳ್' (ಹೂವುಗಳು) ಕಾದಂಬರಿಗೆ 1958ರಲ್ಲಿ ಆನಂದ ವಿಗಡನ್ ಕಾದಂಬರಿ ಪ್ರಶಸ್ತಿ ಲಭಿಸಿತು.

4. 'ವೇರುಕ್ಕು ನೀರು' (ಬೇರಿಗೆ ನೀರು) ಕಾದಂಬರಿಗೆ 1973ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಗಳಿಸಿತು. ಈ ಕೃತಿಯನ್ನು ಡಾ॥ ಕೃಷ್ಣನ್ ಪಥಿಯಂ ಅವರು ಮಲೆಯಾಳಂ ಭಾಷೆಗೂ, ನಯನಲ್ ಮದರಾಸಿಯವರು ಗುಜರಾತಿ ಭಾಷೆಗೂ ಅನುವಾದಿ ಸಿದ್ದಾರೆ.

5. 'ವಳೈಕ್ಕರವ್' (ಬಳೆಗೈ) ಕಾದಂಬರಿಗೆ 1975ರಲ್ಲಿ ಸೋವಿಯತ್ ಲ್ಯಾಂಡ್ ನೆಹರು ಪ್ರಶಸ್ತಿ ದೊರೆತಿದೆ.

6. 'ಕರುಪ್ಪು ಮಣಗಳ್' (ಕಪ್ಪು ಹರಳುಗಳು) ಕಾದಂಬರಿ ಮದರಾಸಿನ ಪ್ರತಿಷ್ಠಿತ ಸಾಹಿತ್ಯ ವೇದಿಕೆ 'ಇಳಕ್ಕಿಯ ಚಿಂತನೈ' ಮೂಲಕ 1979ರ ಶ್ರೇಷ್ಠ ಕೃತಿಯೆಂಬ ಪ್ರಶಸ್ತಿಗೆ ಪಾತ್ರವಾಯಿತು.

7. 1982ರಲ್ಲಿ 'ಸೇಟ್ರಿಲೇ ಮನಿದರ್‌ಗಳ್' ಕಾದಂಬರಿಗೆ ಅದೇ ವೇದಿಕೆಯಿಂದ ವರ್ಷದ ಶ್ರೇಷ್ಠ ಕೃತಿಯ ಪ್ರಶಸ್ತಿ ದೊರೆತಿದ್ದು, 1985ರಲ್ಲಿ ಇದೇ ಕಾದಂಬರಿಗೆ ಭಾರತೀಯ ಭಾಷಾ ಪರಿಷತ್ತಿನ ಪ್ರಶಸ್ತಿ ಸಹಾ ಲಭಿಸಿದೆ.

8. 1987 ರಲ್ಲಿ 'ಸುಳಲಿಲ್ ಮಿಡಕ್ಕುಂ ದೀಪಂಗಳ್' (ಸುಡರಲ್ಲಿ ಮಿಣುಕುವ ದೀಪಗಳು) ಕಾದಂಬರಿಗೆ ತಮಿಳುನಾಡು ಅರಸು ಪ್ರಶಸ್ತಿ ಲಭಿಸಿದೆ.

9. 1994ರಲ್ಲಿ 'ಅವಳ್' ಕಥಾ ಸಂಕಲನಕ್ಕಾಗಿ ನಂಜನಗೂಡು ತಿರುಮಲಾಂಬಾ ಶಾಶ್ವತಿ ಪ್ರಶಸ್ತಿ ಲಭಿಸಿದೆ.

* * *

## ಕೆಲವು ಮುಹತ್ವದ ಕೃತಿಗಳು :

**1) ವಳ್ಳೈಕ್ಕರವ್ (ಬಳೆಗೈ)** : ಗೋವಾ ಸ್ವಾತಂತ್ರ್ಯ ಚಳವಳಿಯ 11 ವರ್ಷಗಳ ಐತಿಹಾಸಿಕ ಘಟನೆ ಈ ಕೃತಿಯ ವಸ್ತು. ಸಾಮುದಾಯಿಕ ಚಳವಳಿಗಳಲ್ಲಿ ಮಹಿಳೆಯರೇ ದೊಡ್ಡತ್ಯಾಗ ಮಾಡಿದ್ದರೂ ರಾಜಕೀಯ ಸಾಮಾಜಿಕ ಇತಿಹಾಸದಲ್ಲಿ ಅವರ ಪಾತ್ರಗಳನ್ನು ಗುರುತಿಸುವುದೇ ಇಲ್ಲ. ರಾಜಂ ಕೃಷ್ಣನ್ ಈ ಕಾದಂಬರಿಯಲ್ಲಿ ಸೃಷ್ಟಿಸಿರುವ ನಾಯಕಿ ಸುಜಾತೈ, ರುಕ್ಮಿಣಿಯ ಮಲತಾಯಿ, ಆದರ್ಶವಾದಿ ಶಾಂತಿನಿ, ಸಾಮಾಜಿಕ ಕಾರ್ಯಕರ್ತೆ ಲೂಸಿಯಾ, ಹದಿಹರೆಯದ ಯುವತಿ ಪುಷ್ಪ ಈ ಒಬ್ಬೊಬ್ಬರೂ ಸ್ತ್ರೀಯರೊಳಗೆ ಹುದುಗಿರುವಂಥ ಶಕ್ತಿಯ ಜ್ವಾಲೆಗಳಂಥ ದಿಟ್ಟ ಮಹಿಳೆಯರ ಪರಂಪರೆಯನ್ನು ಪ್ರತಿನಿಧಿಸುವಂತಿದ್ದಾರೆ. ಇತಿಹಾಸದ ಪ್ರತಿ ತಿರುವಿನಲ್ಲೂ ಪರಿಸ್ಥಿತಿಯ ಆಕ್ರಮಣದೆದುರೂ ಸ್ತ್ರೀಯರು ಸಮರ್ಥವಾಗಿ ಮೇಲೇಳಬಲ್ಲರು ಎಂಬುದರ ಪ್ರತೀಕ ಇವರುಗಳಲ್ಲಿ ಕಂಡುಬರುತ್ತದೆ. 1966ರಲ್ಲಿ 'ಸ್ವದೇಶಿ ಮಿತ್ರನ್' ಸಾಪ್ತಾಹಿಕದಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿ 1969ರಲ್ಲಿ ಪೂರ್ಣ ಪುಸ್ತಕವಾಗಿ ಮುದ್ರಣಗೊಂಡಿತು. 1970ರ ವೇಳೆಗೆ ಪ್ರತಿಗಳೆಲ್ಲ ತೀರಿದ್ದು, ಮುದ್ರಣದ ನಿರೀಕ್ಷೆಯಲ್ಲಿರುವ ಕೃತಿ.

**2) ವೇರುಕ್ಕು ನೀರ್ (ಬೇರುಗಳಿಗೆ ನೀರು)** 1972ರಲ್ಲಿ ಬರಹಗಾರರ ಸಹಕಾರ ಪ್ರಕಾಶನ ಸಂಸ್ಥೆ ಮೂಲಕ ಮೊದಲು ಪ್ರಕಟವಾದ ಈ ಕಾದಂಬರಿಯು ಗಾಂಧಿಯ ತತ್ವದ ಆದರ್ಶಗಳನ್ನು ಆಳವಾಗಿ ನಂಬಿದ ಚೇತನವೊಂದು ಸಮಕಾಲಿನ ರಾಜನೀತಿಯಲ್ಲಿ ತುಂಬಿರುವ ಹಿಂಸೆ, ದ್ವೇಷ, ಪ್ರತೀಕಾರ, ಅಧಿಕಾರ ದಾಹ, ಅವಕಾಶವಾದಿತನಗಳ ಎದುರಲ್ಲಿ ಅನುಭವಿಸುವ ಯಾತನೆ, ಘಾಸಿ, ದ್ವಂದ್ವ, ತಾಕಲಾಟಗಳನ್ನು ಉದ್ದಕ್ಕೂ ಎಲ್ಲಿಯೂ ಓದುಗರು ಸ್ವಾರಸ್ಯ ಕಳೆದುಕೊಳ್ಳದ ಹಾಗೆ ಚಿತ್ರಿಸುತ್ತದೆ. ಈ ಕೃತಿ 1973ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನೂ ಗಳಿಸಿದೆ.

**3) ಮುಳ್ಳುಂ ಮಲರ್ನ್ದದು** : ಚೆಂಬಲ್ ಕಣಿವೆಯ ಡಕಾಯಿತರ ಬದುಕಿನಲ್ಲಿ ಅಪರಾಧ, ಪ್ರೇಮ ಕಾಮ, ಪ್ರತೀಕಾರ, ದ್ರೋಹಗಳ ಭೀಕರತೆಯೇ ತುಂಬಿರುವುದನ್ನು ತುಂಬ ಅಧ್ಯಯನ ಪೂರ್ಣವಾದ ವಾಸ್ತವ ವಿವರಗಳೊಂದಿಗೆ ಚಿತ್ರಿಸುವ ಈ ಕಾದಂಬರಿ 1979ರಲ್ಲಿ ಪ್ರಕಟವಾಗಿದೆ.

**4) ಅಲೈನ್ನೈಕ್ಕು ಕರೆಯಿಲೆ** : ಕರಾವಳಿಯ ತೂತುಕೋರಿನ್ ಪ್ರದೇಶದಲ್ಲಿ ವಾಸಿಸುವ ಬೆಸ್ತ ಜನಾಂಗದ ಜೀವನದ ವಾಸ್ತವ ಚಿತ್ರಣವಿರುವ ಈ ಕೃತಿಯಲ್ಲಿ ಆ ಜನಗಳ ಆಡುಭಾಷೆಯ ನಿರ್ಭಿಡೆಯಾದ ಬಳಕೆ, ಅವರ ರೀತಿ ನೀತಿಗಳ ನೈಜ ಚಿತ್ರಣಗಳು ರಾಜಂ ಅವರ ಕಿರೀಟದ ಮತ್ತೊಂದು ಹೆಮ್ಮೆಯ ಗರಿ ಈ ಕೃತಿ ಎಂಬುದನ್ನು ಸಾರುವಂತಿದೆ. ಓದಬಲ್ಲ, ಮರೆಯಲಾಗದ ಕೃತಿ ಇದು.

**5) ಸುಳಲಿಲ್ ಮಿಡಿಕ್ಕುಂ ದೀಪಂಗಳ್** : ಕುಟುಂಬ ಮತ್ತು ಸಮಾಜದಲ್ಲಿನ ಹೆಣ್ಣಿನ ಸ್ಥಾನ ಮಾನಗಳನ್ನು ಕುರಿತು ಮುಕ್ತವಾಗಿ ಚರ್ಚಿಸುವ ಈ ಕಾದಂಬರಿ 1987ರಲ್ಲಿ ಪ್ರಕಟವಾಗಿದೆ.

**6) ಅಂಕಲೋಡು ಪೆಣ್‌ಗಳುವ್**: ಹೆಣ್ಣು ಶಿಶುಹತ್ಯೆಯೂ ಸೇರಿದಂತೆ ಅನೇಕ ಸಾಮಾಜಿಕ ಸಮಸ್ಯೆಗಳ, ಸಾಮಾಜಿಕ ಅನ್ಯಾಯಗಳ ವಿರುದ್ಧವಾಗಿ ಹೋರಾಡುತ್ತಲೇ ಮೇಲೇಳುತ್ತಿರುವ ಆಧುನಿಕ ಮಹಿಳೆಯರ ಬದುಕನ್ನು ಚಿತ್ರಿಸುವ ಈ ಕೃತಿ 1988ರಲ್ಲಿ ಪ್ರಕಟಿತ.

**7) ಮಣಕ್ಕಾದ ಪೂಂತುಲಿಗಳ್** : ಮಧುರೈ ಜಿಲ್ಲೆಯ ಉಸಿಲಂಪತ್ತಿ ಜನಾಂಗದಲ್ಲಿ ಕಳೆದ 15–20 ವರ್ಷಗಳಿಂದ ಬೆಳೆದಿರುವ ಹೆಣ್ಣು ಶಿಶುಹತ್ಯೆಯ ಕ್ರೂರ ಆಚರಣೆಯನ್ನು ಕುರಿತ ವ್ಯಾಪಕ ಸಂಶೋಧನೆಯ ಫಲವಾಗಿ ರಚಿಸಿದ ಕಾದಂಬರಿ ಇದು.

**8) ಕರುಪ್ಪು ಮಣಿಗಳ್** : ಸಮುದ್ರ ತೀರದ ಉಪ್ಪು ತಯಾರಿಸುವ ಕಾಯಕದ ಜನರ ಬದುಕಿನ ದುರ್ಭರ ಪರಿಸ್ಥಿತಿಯ ವಾಸ್ತವ ಚಿತ್ರಣವುಳ್ಳ ಈ ಕೃತಿಯ ಪ್ರಕಟಣೆ–1990.

**9) ವೀಡು** : 1977ರಲ್ಲಿ ಮೊದಲು ಪ್ರಕಟವಾದ ಈ ಕೃತಿ ಮಧ್ಯಮ ವರ್ಗದ ಕೌಟುಂಬಿಕ ಬದುಕನ್ನು ಚರ್ಚಿಸುವ ವಸ್ತುವುಳ್ಳದ್ದು. ದರ್ಪಿಷ್ಟ ಗಂಡಿನ ಪರಂಪರಾಗತ ಹೆಮ್ಮೆ ಮತ್ತು ಮೌನಿಯಾದರೂ ಬಲಿಷ್ಟಳಾಗಿ ಹೊಸ ಯುಗಕ್ಕೆ ಹೊಸ್ತಿಲು ನಾಚೆಗೆ ಹೊಮ್ಮುವ ಹೆಣ್ಣು, ಹೊಸತು–ಹಳತುಗಳ ನಡುವೆ ಹೆಚ್ಚುತ್ತಿರುವ ಬಿರುಕಿನ ಚಿತ್ರಣ ಈ ಕೃತಿಯಲ್ಲಿದ್ದು ವಿಮರ್ಶಕರು ವಿಮೋಚನೆಯ ಹೊಸದೃಷ್ಟಿ

ಕೋನವನ್ನು ಈ ಕೃತಿಯಲ್ಲಿ ಗುರುತಿಸಿ, ಇಬ್ಸನ್ನಿನ 'ಡಾಲ್ಸ್ ಹೌಸ್'ಗೆ ಇದನ್ನು ಹೋಲಿಸಿದ್ದುಂಟು.

**10) ಕೂಟು ಕುಂಜುಗಳ್ :** ಅಂತರ ರಾಷ್ಟ್ರೀಯ ಮಕ್ಕಳ ವರ್ಷದ ದಾಖಲೆಯಾಗಿ ರಚಿತವಾದ ಈ ಕಾದಂಬರಿ 1978ರ ಡಿಸೆಂಬರ್‌ನಲ್ಲಿ ಸಂಭವಿಸಿದ ಘಟನೆಯೊಂದರ ಸುತ್ತ ಕೇಂದ್ರೀಕೃತವಾಗಿದೆ. 'ಶಿವಕಾಶಿ ಮ್ಯಾಚ್ ಫ್ಯಾಕ್ಟರಿ'ಗೆ ಸೇರಿದ್ದ ದುಡಿವ ಮಕ್ಕಳನ್ನು ತುಂಬ ತುಂಬಿಕೊಂಡಿದ್ದ ಬಸ್ಸು ನದಿಗೆ ಉರುಳಿ, ನದಿಯ ಪ್ರಚಂಡ ಪ್ರವಾಹದಲ್ಲಿ ಅವರೆಲ್ಲ ಕೊಚ್ಚಿಹೋದರು. ಈ ದುರಂತವನ್ನು ಮಾರ್ಮಿಕವಾಗಿ ಕಥೆಯಾಗಿಸಿದ ಕೃತಿ ಇದು. 1980ರಲ್ಲಿ ಪ್ರಕಟಗೊಂಡಿದೆ.

(ಈ ಮೇಲಿನ ಕೃತಿಗಳಲ್ಲದೆ ಇನ್ನೂ ಹಲವಾರು ಸಾಂಸ್ಕೃತಿಕ ಮಹತ್ವದ ಕೃತಿಗಳನ್ನು ರಾಜಂ ಕೃಷ್ಣಂ ಸಾಹಿತ್ಯ ಜಗತ್ತಿಗೆ ನೀಡಿದ್ದಾರೆ).

**ಓಸೈಗಳ್ ಅಡಂಗಿಯ ಪಿರಕು :** 1982– ಸಾಮಾಜಿಕ ಕಾದಂಬರಿ. ನಗರಗಳ ಮಧ್ಯಮ ವರ್ಗದ ಮಹಿಳೆಯರ ಸಮಸ್ಯೆಗಳನ್ನು ಕುರಿತದ್ದು.

**ಸೇಟ್ರಿಲೆ ಮನಿದರ್‌ಗಳ್ :** 1982, ಹಳ್ಳಿಯ ಕೃಷಿ ಕಾರ್ಮಿಕರ ಜೀವನ ಚಿತ್ರಣವಿದೆ.

**ಮನುದಕಿನ್ ಮರಕತಂಗಳ್ :** 1984, ಸಾಮಾಜಿಕ ಕಾದಂಬರಿ.

**ಪುದಿಯ ಸಿರಕುಗಳ್ :** 1985, ಹೊಸ ಮಾನವೀಯ ಮೌಲ್ಯಗಳ ಉದಯ, ಹೊಸ ಮಹಿಳೆಯನ್ನು ಪ್ರತಿಪಾದಿಸುವ ಕೃತಿ.

**ಮಾಣಿಕ್ಕ ಗಂಗೈ :** 1986, ಶ್ರೀಲಂಕಾದಲ್ಲಿ ಭೂಹೀನರಾದ ಪುನರ್ವಸಿತ ಪ್ಲಾಂಟೇಷನ್ ಕಾರ್ಮಿಕರ ಬದುಕಿನ ಸಮಸ್ಯೆಗಳ ಚಿತ್ರಣವನ್ನುಳ್ಳದ್ದು.

**ಊಮೈ ಆರಂಗಳ್ :** ಸ್ತ್ರೀ ಸಮಸ್ಯೆಗಳನ್ನು ವಾಸ್ತವ ನೆಲೆಯಲ್ಲಿ ಚರ್ಚೆಗೆ ಗುರಿಪಡಿಸುವ ಮತ್ತೊಂದು ಸಾಮಾಜಿಕ ಕಾದಂಬರಿ 1989ರಲ್ಲಿ ಹೊರಬಂದದ್ದು.

**ತೋಟಕ್ಕಾರಿ :** ಹೊಸ ಮಾನವೀಯ ಮೌಲ್ಯಗಳಿಗಾಗಿ, ಹೊಸ ಬದಲಾವಣೆಗಳಿಗಾಗಿ ಹೋರಾಡುತ್ತಿರುವ ಆದರ್ಶ ಮಹಿಳೆಯ ಸಾಮಾಜಿಕ ಸ್ಥಿತಿಯನ್ನು ಚಿತ್ರಿಸುವ ಕೃತಿ 1989ರಲ್ಲಿ ಪ್ರಕಟಿತ.

**ಕಳಂ :** 10 ಸಣ್ಣ ಕಥೆಗಳ ಸಂಕಲನ, 1985 ರಲ್ಲಿ ಪ್ರಕಟವಾಗಿದೆ.

**ಊಮೈ ಆರಂಗಳ್ :** ಮಹಿಳಾ ಸಮಸ್ಯೆಗಳನ್ನು ಚರ್ಚಿಸಿರುವ ಮತ್ತೊಂದು ಕಾದಂಬರಿ (1989).

**ಕಾಕ್ಕಾಣಿ :** 1983ರಲ್ಲಿ ರಚಿತವಾದ ಮಕ್ಕಳ ಕಾದಂಬರಿ. ಅಪಘಾತದಲ್ಲಿ ಒಂದು ರೆಕ್ಕೆ ಮುರಿದುಕೊಂಡ ಹೆಣ್ಣು ಕಾಗೆಯೊಂದು ಬದುಕಿಗಾಗಿ ನಡೆಸುವ ಯುಕ್ತಿ, ಹೋರಾಟದ ಸಫಲತೆಯನ್ನು ಚಿತ್ರಿಸುತ್ತದೆ.

**ಇಕ್ಕಿಣಿ ಅರಸುಕುಮಾರಿ :** ಹುಲಿಗಳ ಸಂಘವೊಂದನ್ನು ಕಾಣಲೆಂದು ಹೊರಟ ಹುಲಿಯೊಂದು ದಾರಿ ತಪ್ಪಿ, ಬಂಧುಗಳಿಂದ, ತನ್ನ ಹಿಂಡಿನಿಂದ ಬೇರ್ಪಟ್ಟು ಅನುಭವಿಸುವ ಕಷ್ಟಗಳೊಂದಿಗೆ ಪರಿಸರ ಸಮಸ್ಯೆಗಳು, ಯುದ್ಧ ವಿರೋಧಿಯಾದ ಶಾಂತಿ ತತ್ವದತ್ತ ಒತ್ತು ನೀಡುವ ಮತ್ತೊಂದು ಮಕ್ಕಳ ಕಾದಂಬರಿ.

**ಅಮ್ಮಾವುಂ ತೋೞರ್‌ಕಳುಂ :** 1988ರಲ್ಲಿ ಬರೆದ ಇನ್ನೊಂದು ಮಕ್ಕಳ ಕೃತಿ. ಕರಡಿ ಮರಿಯೊಂದು ಖಾಯಿಲೆ ಮಲಗಿದ ತನ್ನ ತಂದೆಗಾಗಿ ಸುರಗಿ ಹೂ ಜೇನನ್ನು ತರಲು ನಗರಕ್ಕೆ ಬಂದು, ಮಾನವ ಮಕ್ಕಳೊಂದಿಗೆ ಪಡೆವ ಅನುಭವ, ಸ್ನೇಹಗಳ ಕಥೆ ಇದು. ಪರಿಸರ ವಿನಾಶದ ವಿರುದ್ಧವಾಗಿ ಜಾಗೃತಿ ಮೂಡಿಸುವ ಉದ್ದೇಶದ ಕೃತಿ ಇದು.

**ಪಾಂಚಾಲಿ ಶಪಥಮ್ ಪಾಡಿಯ ಭಾರತಿ :** ಮಹಾಕವಿ ಸುಬ್ರಹ್ಮಣ್ಯ ಭಾರತಿಯವರ ಜೀವನದ ಪರಿಚಯ ಮಾಡಿಸುವ ಕೃತಿ.

**ಮಣಲೂರ್ ಮಣಿ ಅಮ್ಮಾಳ್ :** ತಮಿಳುನಾಡಿನಲ್ಲಿ 1891 ರಿಂದ 1953ರ ವರೆಗೆ ಅತ್ಯಂತ ಕ್ರಾಂತಿಕಾರಕವಾಗಿ ಬದುಕು ನಡೆಸಿದ ಧೀಮಂತ ಮಹಿಳೆಯ ಸಾಮಾಜಿಕ ವೈಷಮ್ಯಗಳು, ಸಾಂಪ್ರದಾಯಿಕ ಕಂದಾಚಾರಗಳ ವಿರುದ್ಧ ನಡೆಸಿದ ಹೋರಾಟದ ಚರಿತ್ರೆ.

ಡಾ॥ ರಂಗಾಚಾರಿ ಅವರ ಜೀವನೋದಂತವನ್ನು ಚಿತ್ರಿಸುವ ಕೃತಿಯನ್ನೂ ರಾಜಂ ರಚಿಸಿದ್ದು, ಕೆ.ಪಿ.ಕೆ. ಮೇನನ್ ಅವರ ಜೀವನ ಚರಿತ್ರೆ (ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತ ಕೃತಿ)ಯೊಂದನ್ನು ನ್ಯಾಷನಲ್ ಬುಕ್ ಟ್ರಸ್ಟ್‌ಗಾಗಿ ತಮಿಳಿಗೆ ಅನುವಾದಿಸಿದ್ದಾರೆ. ಮಲೆಯಾಳಂ ಭಾಷೆಯಲ್ಲಿ ಪರಿಶ್ರಮವಿರುವ ಈ ಲೇಖಕಿ ಹಲವಾರು ಲೇಖಕರ ಸಣ್ಣ ಕಥೆಗಳು ಮತ್ತು ವೈಚಾರಿಕ ಲೇಖನಗಳನ್ನು ತಮಿಳಿಗೆ ಅನುವಾದಿಸಿದ್ದಾರೆ.

(24ನೇ ಪುಟಕ್ಕೆ)

# ಮಹಿಳೆ ಮತ್ತು ವಿಮೋಚನೆಯ ಆಂದೋಲನ : ಮೂರು ಟಿಪ್ಪಣಿಗಳು

## 1

"ಮಹಿಳೆಯ ಸಮಗ್ರ ವಿಮೋಚನೆ ಮತ್ತು ಆಕೆ ಪುರುಷ ಸಮಾನಳಾಗುವುದು ನಮ್ಮ ಸಾಂಸ್ಕೃತಿಕ ಬೆಳವಣಿಗೆಯ ಅಂತಿಮ ಗುರಿ. ಈ ಗುರಿಯ ಸಾಧನೆ ಯಾಗುವುದನ್ನು ಜಗತ್ತಿನ ಯಾವ ಶಕ್ತಿಯೂ ತಡೆಯ ಲಾರದು. ಆದರೆ ಇದು ಸಾಧ್ಯವಾಗುವುದು ಮನುಷ್ಯನ ಮೇಲೆ ಮನುಷ್ಯನ ದಬ್ಬಾಳಿಕೆಯನ್ನೇ ರದ್ದುಪಡಿಸು ವಂಥ, ಆದ್ದರಿಂದ ಬಂಡವಾಳಶಾಹಿಯಿಂದ ದುಡಿ ಯುವ ವರ್ಗದ ಮೇಲಿನ ದಬ್ಬಾಳಿಕೆಯನ್ನೂ ರದ್ದು ಪಡಿಸಬಲ್ಲ ಸಮಗ್ರ ಬದಲಾವಣೆಯು ಸಾಧ್ಯವಾದಾಗ ಮಾತ್ರ, ಕೇವಲ ಈಗ ಮಾತ್ರ ಮಾನವನ ಬೆಳವಣಿಗೆ ಆದರ ಶಿಖರವನ್ನು ಮುಟ್ಟಲು ಸಾಧ್ಯ. ಸಹಸ್ರಾರು ವರ್ಷಗಳಿಂದಲೂ ಮಾನವರು ಕನಸು ಕಾಣುತ್ತ ಬಂದಿ ರುವ, ಹಂಬಲಿಸುತ್ತಿರುವ 'ಸುವರ್ಣ ಯುಗ' ಕೊನೆ ಗೊಮ್ಮೆ ಬರಲಿದೆ. ಆದರಿಂದ ವರ್ಗ ದಬ್ಬಾಳಿಕೆ ಶಾಶ್ವತವಾಗಿ ಕೊನೆಗೊಳ್ಳುವುದು. ಆದರೊಂದಿಗೇ ಸ್ತ್ರೀ ಮೇಲಿನ ದಬ್ಬಾಳಿಕೆಯೂ ಕೊನೆಗೊಳ್ಳುವುದು."

— August Bebel : *Society of the future.*

ಬೆಬೆಲನ ಮಾತಿಗೆ ಒಂದು ಟಿಪ್ಪಣಿಯನ್ನು ಬಹುಶಃ ಹೀಗೆ ಸೇರಿಸಬಹುದು ;

ಸಾಂಪ್ರದಾಯಿಕದಾಗಿ ನಮ್ಮಲ್ಲಿರುವ ಸ್ತ್ರೀ ಮತ್ತು ಶೂದ್ರ ಸಮೀಕರಣ ಮೇಲಿನ ವಿಚಾರಕ್ಕೆ ಸಂಬಂಧಿಸಿದೆ. ಸ್ತ್ರೀ = ಶೂದ್ರ = ದುಡಿಯುವ ವರ್ಗ. ಶೂದ್ರರ ವಿಮೋಚನೆ ಆದಲ್ಲದೆ ಸ್ತ್ರೀ ವಿಮೋಚನೆಯೂ ಅಸಾಧ್ಯ. ಈ ರೀತಿ ಶೋಷಣೆಯ ಮಾನದಂಡವನ್ನು ಸ್ಥೂಲವಾಗಿ ಗುರುತಿಸಬಹುದು—

ಶೂದ್ರ ಸ್ತ್ರೀ–ಶೋಷಣೆಯ ಪಿರಮಿಡ್ಡಿನ ತಳದ ರೇಖೆಯ ನೆಲೆ (ತೀವ್ರವಾಗಿ ದಮನಕ್ಕೊಳಗಾಗುವಳು)

ಶೂದ್ರ ಪುರುಷ

ಇತರ ಸ್ತ್ರೀಯರು

ಇತರ ಪುರುಷರು

ಶ್ರೀಮಂತ ವರ್ಗದ ಸ್ತ್ರೀ

ವ್ಯವಸ್ಥೆಯ ಯಜಮಾನ–ಶೋಷಣೆಯ ಪಿರ ಮಿಡ್ಡಿನ ತುಟ್ಟತುದಿಯ ಬಿಂದು (ಅತ್ಯಂತ ಅಬಾಧಿತ)

'ಶೂದ್ರ' ಎಂಬುದರೊಳಗೇ ಅಸ್ಪೃಶ್ಯರು, ಮತ್ತಿತರ ಹಿಂದುಳಿದ ವರ್ಗಗಳನ್ನೂ ಸೇರಿಸಬೇಕು. ಹೋರಾಟದ ನಂತರ ಶೂದ್ರರ ಶೋಷಣೆ ನಿಂತರೂ ಕೂಡ ಸ್ತ್ರೀಯರ ಮೇಲಿನ ಶೋಷಣೆ ಮುಂದುವರೆ ಯುತ್ತದೆ. ಆದ್ದರಿಂದ ಹೊಸಬಗೆಯ ಹೋರಾಟ ವೊಂದು ಹೊರಹೊಮ್ಮುತ್ತದೆ. ಮೊದಲಲ್ಲಿ ಈ ಹೋರಾಟ ಕೌಟುಂಬಿಕ ಮತ್ತು ಸಾಮಾಜಿಕಾರ್ಥಿಕ— ಹೀಗೆ ಎರಡು ರೀತಿಯಿಂದ ನಡೆಯುತ್ತದೆ. [ವರ ದಕ್ಷಿಣೆಯ ಸಲುವಾದ ಬೆದರಿಕೆ–ಹಿಂಸೆಗಳು, ಸಾವು ತನ್ನದೇ ಆದ ಲಕ್ಷಣವ್ಯಾಖ್ಯಾನವನ್ನು ಪಡೆದುಕೊಳ್ಳು ತ್ತದೆ. ಆದ್ದರಿಂದ ಈ ಶೋಷಣೆಯ ಸಾಮಾನ್ಯ ಆಕೃತಿಯೊಳಗೆ ಆದನ್ನು ಅಳವಡಿಸಲಾಗದು.]

## 2

ಗಬ್ರೂಯ್ಡ್ ಗ್ವಿಲೋಮ್ ಶಾಖ್ ಒಬ್ಬ ಜರ್ಮನ್ ಸಮಾಜವಾದಿ. ಆಕೆ ಮಹಿಳೆಯರ ದುಡಿ ಮೆಯ ಬಗ್ಗೆ ಲೇಖನವೊಂದನ್ನು ಬರೆಯುತ್ತಿದ್ದು, ಎಂಗೆಲ್ಸ್ ಆವರನ್ನು ಕುರಿತು ಫ್ರೆಂಚ್ ದುಡಿಮೆಗಾರರ ಪಕ್ಷದ 'ಸಮಾನ ದುಡಿಮೆಗೆ ಸಮಾನ ವೇತನ' ಕಾರ್ಯಕ್ರಮವನ್ನು ಮಾರ್ಕ್ಸ್ ಮತ್ತು ಎಂಗೆಲ್ಸ್ ಜೊತೆಗೂಡಿ ರೂಪಿಸಿಕೊಟ್ಟರು ಎಂಬುದು ನಿಜವೆ ಎಂದು ಪ್ರಶ್ನಿಸಿದ್ದರು. ಆದಕ್ಕೆ ಉತ್ತರಿಸುತ್ತಾ ಎಂಗೆಲ್ಸ್ ಸುಮಾರು ಜುಲೈ 5, 1885ರಲ್ಲಿ ಬರೆದ ಪತ್ರವನ್ನು ಇಲ್ಲಿ ಉದ್ಧರಿಸಬಸುದು :

....ಕೆಲವು ರಾಜಕೀಯ ಕಾರ್ಯಗಳಲ್ಲಿ ಮಾರ್ಕ್ಸ್ ಮತ್ತು ನನ್ನ ರಹಸ್ಯ ಸಹಯೋಗದ ಬಗ್ಗೆ ಪ್ರಕಾಶಕ್ಕೆ ತರುವುದನ್ನು ಅಂತಿಮ ಉದ್ದೇಶವಾಗಿರುವಂಥ ಮಾಹಿತಿಯೊಂದನ್ನು ನಿಮಗೆ ನೀಡಲು ನನಗೆ ಯಾವ

ಹಕ್ಕೂ ಇಲ್ಲ ಎಂದು ಮಾತ್ರ ಹೇಳಬಹುದು. ಫ್ರೆಂಚರ ಸಾಮಾನ್ಯ ಕಾರ್ಯಕ್ರಮವೊಂದಕ್ಕೆ–ಅದರ ಸ್ವರೂಪ ಲೆಕ್ಕಕ್ಕೆ ತಂದುಕೊಂಡರೆ ನಮ್ಮನ್ನು ಸಲಹೆ ಕೇಳಿರಬಹುದು ಎನ್ನಿಸುವಂಥದಕ್ಕೆ–ಮಾರ್ಕ್ಸ್ ಅವರ ಅಥವಾ ನನ್ನದೇ ಹೆಸರಿನಲ್ಲಿ ಯಾವುದೇ ಜವಾಬ್ದಾರಿಯನ್ನೂ ನಾನು ವಹಿಸಿಕೊಳ್ಳಲಾರೆ. ಹೇಗಾದರೂ ಅಂತರ್ಯದಲ್ಲಿ ನಿಮಗೆ ನಾನು ತಿಳಿಸಬಹುದಾದ್ದು ಎಂದರೆ ರೋಅನ್*ನಲ್ಲಿನ 'ಪಾರ್ತೀ ಒಪ್ರಿಯೇರ್' ಸಂಪ್ರದಾಯಕ್ಕೆ ಮೂಲದ ಪೀಠಿಕೆ ಹುಟ್ಟಿದ್ದು ಮಾರ್ಕ್ಸ್ ಅವರಿಂದಲೇ.

ಮಹಿಳೆಯರ ದುಡಿಮೆಯನ್ನು ಪರಿಮಿತಗೊಳಿಸುವ ಬಗ್ಗೆ ಫ್ರೆಂಚರ ಬೇಡಿಕೆಗಳು ಜರ್ಮನರ ಬೇಡಿಕೆಗಳಿಗಿಂತ ಕಡಿಮೆ ಆಗ್ರಹವುಳ್ಳದ್ದಾಗಿರುವುದಕ್ಕೆ ಫ್ರಾನ್ಸ್‌ನಲ್ಲಿ, ವಿಶೇಷವಾಗಿ ಪ್ಯಾರಿಸ್ಸಿನಲ್ಲಿ ಮಹಿಳೆಯರ ಕಾರ್ಖಾನೆ ದುಡಿಮೆಯ ಪಾತ್ರ ತುಲನಾತ್ಮಕವಾಗಿ ಗೌಣವಾಗಿರುವುದೇ ಆಗಿದೆ. ಎರಡೂ ಲಿಂಗ ಜಾತಿಗಳಿಗೆ ಸಮಾನ ದುಡಿಮೆಗೆ ಸಮಾನ ವೇತನದ ಬೇಡಿಕೆಯು ಕೂಲಿ ವ್ಯವಸ್ಥೆಯೇ ಪೂರ್ಣವಾಗಿ ರದ್ದಾಗುವವರೆಗೂ ಎಲ್ಲ ಸಮಾಜವಾದಿಗಳೂ ಮುಂದಿಟ್ಟೇ ಇಡುತ್ತಾರೆಂಬುದು ನನ್ನ ತಿಳುವಳಿಕೆ. ದುಡಿಯುವ ವರ್ಗದ ಮಹಿಳೆಗೆ, ಆಕೆಯ ಶಾರೀರಕವಾದ ವಿಶಿಷ್ಟ ಕಾರ್ಯಗಳಿಗಾಗಿ, ಬಂಡವಾಳಶಾಹಿ ಶೋಷಣೆಯ ವಿರುದ್ಧ ವಿಶೇಷವಾದ ರಕ್ಷಣೆಯು ಅವಶ್ಯಕವೇ ಆಗಿರುತ್ತದೆ ಎಂಬುದು ನನಗಂತೂ ಸ್ಪಷ್ಟವಾದ ಸಂಗತಿಯೆನಿಸುತ್ತದೆ. ಇಂಗ್ಲಿಷ್ ಮಹಿಳೆಯರು ತಮ್ಮ ಲಿಂಗಜಾತಿಯ ಸದಸ್ಯರ ಔಪಚಾರಿಕ ಹಕ್ಕುಗಳನ್ನು ಎತ್ತಿಹಿಡಿದು ಬಂಡವಾಳಶಾಹಿಯಿಂದ ಪುರುಷರು ಎಷ್ಟು ಶೋಷಿತರೋ ಅಷ್ಟೇ ಶೋಷಣೆಗೆ ತಾವೂ ಒಳಗಾಗಲು ಸಿದ್ಧರಾದರು. ಅವರು ಬಹುಮಟ್ಟಿಗೆ ನೇರವಾಗಿಯೋ, ಪರೋಕ್ಷವಾಗಿಯೋ ಸ್ತ್ರೀ – ಪುರುಷರಿಬ್ಬರನ್ನೂ ಬಂಡವಾಳಶಾಹಿಯು ಶೋಷಿಸುವುದರತ್ತಲೇ ಆಸಕ್ತರಾಗಿದ್ದಾರೆ.

## 3

ಬಂಡವಾಳಶಾಹಿ ಉತ್ಪಾದನಾ ವಿಧಾನಗಳ ಕೊನೆಯ ವರ್ಷಗಳಲ್ಲಿ, ಸ್ತ್ರೀ–ಪುರುಷರ ಔಪಚಾರಿಕ ಪರಮ ಸಮಾನತೆಗಿಂತಲೂ ಮುಂದಿನ ಪೀಳಿಗೆಯ ಆರೋಗ್ಯದ ಬಗ್ಗೆ ನಾನು ಹೆಚ್ಚು ಆಸಕ್ತಿ ಹೊಂದಿದ್ದೇನೆಂಬುದನ್ನು ಇಲ್ಲಿ ಒಪ್ಪಿಕೊಳ್ಳಲೇಬೇಕು. ನನ್ನ ದೃಢವಾದ ನಂಬಿಕೆಯೆಂದರೆ ಬಂಡವಾಳಶಾಹಿಯಿಂದ ಈ ಎರಡೂ ಲಿಂಗಜಾತಿಯ ಶೋಷಣೆ ರದ್ದಾಗಿ, ಖಾಸಗಿ ಮನೆಗೆಲಸವು ಸಾರ್ವಜನಿಕವಾದ ಉದ್ಯಮವಾಗಿ ಬದಲಾವಣೆ ಹೊಂದಿದರೆ ಮಾತ್ರ ಸ್ತ್ರೀಯರು ಮತ್ತು ಪುರುಷರ ಸಮಾನತೆಯ ಒಂದು ವಾಸ್ತವಾಂಶ ಆಗಬಹುದು.*

ಟಿಪ್ಪಣಿ : 1. ರೋಅನ್ ಎಂಬ ಸ್ಥಳದಲ್ಲಿ 1882ರಲ್ಲಿ ದುಡಿಯುವ ಜನರ ಕಾಂಗ್ರೆಸ್ ಸಮಾವೇಶ ಗೊಂಡಿದ್ದು ಮಾರ್ಕ್ಸ್‌ರಿಗೆ ನಿಕಟವಾಗಿದ್ದ ಲಫಾರ್ಗ್ಯು (Lafargue) ಇದರ ನಾಯಕತ್ವ ವಹಿಸಿದ್ದರು.

ಟಿಪ್ಪಣಿ : 2. ಸ್ವತಃ ಸ್ಪಷ್ಟವಿರುವಂತೆ (ಹೊರಗಿನ ಸಮಾನತೆಯ) ಈ ಪರಿಕಲ್ಪನೆ ಒಂದು ತಪ್ಪು ಗ್ರಹಿಕೆಯಾಗಿದ್ದು, ಅದನ್ನು ಸಮರ್ಪಕ ರೀತಿಯಲ್ಲಿ ಪರಿಷ್ಕರಿಸಿ, ವಿಸ್ತರಿಸಬೇಕಾಗಿದೆ. ಅಲ್ಲಿ ನಿರೀಕ್ಷಿಸಿರುವ 'ಕೊನೆ ದಿನಗಳು' ಎಂಬುದೇನೂ ಮೂಲೆಯ ತಿರುವಿನಲ್ಲೇ ಕಾದು ನಿಂತಿಲ್ಲ. 'ಲಿಂಗಜಾತಿಗಳ ಪರಮ ಔಪಚಾರಿಕ ಸಮಾನತೆ'ಗಾಗಿ ನಡೆದ ಹೋರಾಟವು ಬಂಡವಾಳಶಾಹಿಯಡಿಯ ಶೋಷಣೆಗಾಗಿಯೇ ಇರಲಿ, ಅವಶ್ಯಕವೇ ಆಗಿರುತ್ತದೆ. ಆದರೆ ಬಂಡವಾಳಶಾಹಿ ವ್ಯವಸ್ಥೆಯ ಗ್ರಹಣವು ಬಿಟ್ಟನಂತರ ಮುಂದೇನು ಒದಗುತ್ತದೆ ಎಂಬುದರ ಲಕ್ಷ್ಯವನ್ನು ಕಳೆದುಕೊಳ್ಳಬಾರದು ಅಷ್ಟೆ. ಆಮೇಲೆ ಕೂಡ (ಅಂದರೆ ಬೆಬೆಲನ 'ಭವಿಷ್ಯತ್ತಿನ ಸಮಾಜ'ದಲ್ಲೂ) ಲಿಂಗಜಾತಿಗಳ ನಡುವಿನ ಅಸಮಾನತೆಗಳು ಉಳಿದೇ ಇರುತ್ತದೆ. ಆಗ ಒಂದು ಹಂತದಲ್ಲಿ ಸಮಾನತೆಯ ಕಾರ್ಯಕ್ರಮವೂ ಉಚಿತವೇ ಆಗಿರುತ್ತದೆ. ಅಲ್ಲಿಯವರೆಗೂ ಎರಡೂ ವಿಧವಾದ ಶೋಷಣೆಗಳ ವಿರುದ್ಧವೂ ಸಮಾನ ಒತ್ತು ನೀಡುವಂಥ ಕಾರ್ಯಾಚರಣೆಯೇ ಅಗತ್ಯವಿರುತ್ತದೆ.

ಟಿಪ್ಪಣಿ : 3. ಎಂಗೆಲ್ಸ್ ಈ ಸಂದರ್ಭದಲ್ಲಿ ಸಮಾನತೆಯು ವಾಸ್ತವಾಂಶವಾಗ'ಬಹುದು' ಎಂದಿದ್ದಾರೆಯೇ ಹೊರತು 'ಆಗುತ್ತದೆ' ಎಂದಿಲ್ಲ ಎಂಬುದನ್ನು ಗಮನಿಸಬೇಕು. ಹೊಸ ಪರಿಸ್ಥಿತಿಗಳಲ್ಲಿ, ಸರಿಯಾದ ತಂತ್ರಯುಕ್ತವಾದ ಹೋರಾಟವನ್ನು ನಡೆಸಿದ್ದೇ ಆದಲ್ಲಿ, ಈ ಸಮಾನತೆ ವಾಸ್ತವವಾಗಬಹುದು. ಹೊಸ ರೀತಿಯ ಪರಿಸ್ಥಿತಿಗಳು ನಿರ್ಮಾಣವಾಗದಿದ್ದರೆ ಆ ಸಮಾನತೆ ವಾಸ್ತವವಾಗುವ ಸಾಧ್ಯತೆ ಇಲ್ಲವೇ ಇಲ್ಲ ಆದ್ದರಿಂದ ಈ ಹೋರಾಟ ಎರಡು ದಿಕ್ಕಿನಿಂದಲೂ ಒಟ್ಟಾಗಿ ನಡೆಯಬೇಕಾದದ್ದಾಗಿದೆ.

# ಕ್ಯಾನ್ಸರ್ ವಂಶವಾಹಿಗಾಗಿ ಹುಡುಕಾಟ

● ಎನ್. ಸಿ.

ನನ್ನ ಸ್ನೇಹಿತೆಯ ಚಿಕ್ಕಮ್ಮ ಸ್ತನದ ಕ್ಯಾನ್ಸರಿಗೆ ಗುರಿಯಾದವರು. ಆಕೆಯ ದೊಡ್ಡಮ್ಮನ ಮಗಳಿಗೂ ಸ್ತನದ ಕ್ಯಾನ್ಸರಿನ ಶಸ್ತ್ರ ಚಿಕಿತ್ಸೆ ಆಗಿತ್ತು, 'ನಮ್ಮ ಕುಟುಂಬದಲ್ಲಿ ಸ್ತನದ ಕ್ಯಾನ್ಸರ್ ತುಂಬಾ ಕಾಣಿಸಿಕೊಂಡಿದೆ. ನನಗೂ ಮುಂದೆ ಬರತ್ತೇನೋ ಎಂಬ ಭಯ.' ಎಂದು ಆಕೆ ಹೇಳಿದಾಗ, ಬರಬಹುದು–ಬರದಿರಬಹುದು, ಆ ಅನಿಶ್ಚಯದ ಸ್ಥಿತಿಯ ಆತಂಕ ಅರಿವಾಗಿತ್ತು.

ಇಂಥಹುದೇ ಆತಂಕವನ್ನು ಪಿಟ್ಸ್‌ಬರ್ಗಿನ 41 ವರ್ಷದ ಆನಾ ಫಿಷರ್ ಎದುರಿಸಿದ್ದಳು. ಆಕೆಯ ಕುಟುಂಬದಲ್ಲಿ ಮಹಿಳೆಯರಿಗೆ ಕ್ಯಾನ್ಸರ್ ಸತತವಾಗಿ ಬಂದೆರಗಿತ್ತು. ಆಕೆಯ ಅಜ್ಜಿ ಕ್ಯಾನ್ಸರಿನಿಂದ ಸತ್ತಳು. ಫಿಷರ್ ಐದು ವರ್ಷವಿದ್ದಾಗ ಆಕೆಯ ತಾಯಿಯಲ್ಲಿ ಸ್ತನದ ಕ್ಯಾನ್ಸರನ್ನು ಗುರುತಿಸಿ ಸ್ತನವನ್ನು ತೆಗೆದು ಹಾಕಿದ ಮೇಲೆ ಒಂದು ದಶಕದಷ್ಟು ಕಾಲ ಬದುಕಿದ್ದು, ಮತ್ತೊಂದು ಸ್ತನದಲ್ಲಿ ಕ್ಯಾನ್ಸರ್ ಕಾಣಿಸಿಕೊಂಡಾಗ ಸತ್ತಿದ್ದಳು. ಫಿಷರ್ ಚಿಕ್ಕಮ್ಮ ಅಂಡಾಶಯ ಕ್ಯಾನ್ಸರಿನಿಂದ ಸತ್ತಿದ್ದಳು. ಆಕೆಯ ಐದು ಜನ ರಕ್ತ ಸಂಬಂಧಿಕರು ಸ್ತನದ ಕ್ಯಾನ್ಸರಿಗೆ ತುತ್ತಾಗಿದ್ದರು. ಕ್ಯಾನ್ಸರ್ ಆಕೆಗೆ ಪೀಳಿಗೆಗಳಿಂದ ಬಳುವಳಿಯಾಗಿ ಬಂದಂತಿತ್ತು. 1990ರಲ್ಲಿ ಆಕೆಯಲ್ಲಿ ಅಂಡಾಶಯದ ಕ್ಯಾನ್ಸರ್ ಕಂಡಾಗ ತಟ್ಟನೆ ಶಸ್ತ್ರಚಿಕಿತ್ಸೆಗೊಳಗಾಗಿ, ತೀವ್ರತರದ ಕೀಮೋಥೆರಪಿ ಪಡೆದು ಆ ಕ್ಷಣಕ್ಕೆ ಕ್ಯಾನ್ಸರಿನಿಂದ ಮುಕ್ತಳಾಗಿದ್ದಾಳೆ. ಆದರೆ ಆಕೆಯ ಭವಿಷ್ಯದಲ್ಲಿ ಯಾವ ಕ್ಷಣದಲ್ಲೂ ಕ್ಯಾನ್ಸರ್ ಬಂದೆರಗುವ ಭೀತಿ ಇದ್ದೇ ಇತ್ತು, ಈಗ ಕೆಲವು ವರ್ಷಗಳ ಹಿಂದೆಯೇ ವಿಜ್ಞಾನಿಗಳು ಅಂಡಾಶಯದ ಕ್ಯಾನ್ಸರ್ ಮತ್ತು ಸ್ತನದ ಕ್ಯಾನ್ಸರ್ ಕೆಲವೊಮ್ಮೆ ಒಂದೇ ಕುಟುಂಬಗಳಲ್ಲಿ ಪದೇ ಪದೇ ಕಾಣಿಸಿಕೊಳ್ಳುತ್ತದೆ, ಅಲ್ಲೆಲ್ಲೋ ಆ ಕುಟುಂಬದವರಲೆಲ್ಲ ಒಂದು ವಿಧದಲ್ಲಿ ಕೊಂಡಿಯಾದಂತಿದೆ ಎಂದು ಕಂಡುಹಿಡಿದರು. ಫಿಷರಳ ವೈದ್ಯರು ಆಕೆಗೆ ನೀಡಿದ ಸಲಹೆ ತಟ್ಟನೆ ತನ್ನೆರಡೂ ಸ್ತನಗಳನ್ನೂ ತೆಗೆಸಿಹಾಕಿ ಜೀವ ಉಳಿಸಿಕೊಳ್ಳುವುದು. ಇದೀಗ ವಿಜ್ಞಾನಿಗಳು ವಂಶ ಪಾರಂಪರ್ಯವಾಗಿ ಬರುವ ಕೆಲವು ಬಗೆಯ ಸ್ತನದ ಕ್ಯಾನ್ಸರ್ ಹಾಗೂ ಅಂಡಾಶಯ ಕ್ಯಾನ್ಸರಿಗೆ ಕಾರಣವಾದ ವರ್ಣತಂತುವನ್ನು ಹುಡುಕುತ್ತಿದ್ದಾರೆ. ಮೇರಿ–ಕ್ಲಾರ್ ಕಿಂಗ್ ಮೂರು ವರ್ಷದ ಹಿಂದೆ ಅಂಥಾ ವರ್ಣತಂತುವಿನ ಇರುವಿಕೆಯನ್ನು ಪ್ರಕಟಿಸಿದರು. ಕ್ಯಾನ್ಸರ್ ಬಂದೆರಗಿದ ಕುಟುಂಬಗಳ ಮಹಿಳೆಯರ ವರ್ಣತಂತುವನ್ನು ಪರಿಶೀಲಿಸಿದಾಗ, ಈ ಎಲ್ಲ ಪೀಡಿತರ 17ನೇ ವರ್ಣತಂತುವಿನ ಒಂದು ಬಗೆಯ 'ವಂಶವಾಹಿ ಗುರುತ'ನ್ನು ಕಂಡರು. ಇವು ಒಂದೇ ವಿಧದ ಡಿ.ಎನ್.ಎ.ಯ ಹರವುಗಳಾಗಿದ್ದವು. ಈ ಬಗೆಯ ಕೌತುಕ ಈ ರೋಗವಿಲ್ಲದವರಲ್ಲಿ ಕಾಣಲಿಲ್ಲ. ಈ ಕಿಂಗ್ ಅಧ್ಯಯನದ ಗುಂಪಿಗೆ ಫಿಷರ್ ಸೇರಿದಾಗ, ಆಕೆಯಲ್ಲಿ ಈ ವಂಶವಾಹಿ ಗುರುತು ಇರುವುದು ಕಂಡುಬಂದಿತು. ಅವಳೆದುರಿಗಿದ್ದ ದೊಡ್ಡ ಪ್ರಶ್ನೆ ಸ್ತನದ ಕ್ಯಾನ್ಸರ್ ಬರುವ ಮೊದಲೇ ಸ್ತನಗಳೆರಡನ್ನೂ ತೆಗೆಸಿ ಬಿಡುವುದು. ಇಲ್ಲ, ಬರುವವರೆಗೂ ಕಾದು ಸಾವನ್ನು ಹತ್ತಿರಕ್ಕೆ ಕರೆತರುವುದು.

ಅಮೆರಿಕೆಯೊಂದರಲ್ಲೇ ಐದು ಲಕ್ಷ ಮಹಿಳೆಯರು ಈ ವಂಶವಾಹಿಯ ಕಾರಣದಿಂದಾಗಿ ರೋಗವನ್ನು ಪಡೆದವರಿದ್ದಾರೆ. ಇವರಲ್ಲಿ ಶೇಕಡಾ 85 ರಷ್ಟು ಮಹಿಳೆಯರಿಗೆ ಸ್ತನದ ಕ್ಯಾನ್ಸರ್ ಬರುವ ಸಾಧ್ಯತೆ ಇದೆ. ಸದ್ಯದಲ್ಲಿಯೇ ವಿಜ್ಞಾನಿಗಳು ಈ ರೋಗಕ್ಕೆ ಕಾರಣವಾದ ವಂಶವಾಹಿಯನ್ನು ನಿಖರವಾಗಿ ಗುರುತಿಸಲಿದ್ದಾರೆ. ಆದರಾಚೆ ಒಂದು ರಕ್ತ ಪರೀಕ್ಷೆಯಿಂದಲೇ ಅದರ ಇರುವಿಕೆಯನ್ನು ಕಂಡುಹಿಡಿಯಬಹುದಿದೆ. ಸ್ತನಗಳನ್ನು ತೆಗೆದೊಡನೆ ಸಾವು ತಪ್ಪುವುದೆಂಬ ಭರವಸೆ ನೀಡುವುದು ಕಷ್ಟವಾದರೂ ಸಾವಿನ ಸಾಧ್ಯತೆ ಖಂಡಿತಾ ದೂರವಾಗಲಿದೆ. ★

# ಪುರುಷ ವೇಶ್ಯೆಯರು-ವಿಕೃತ ಸಮಾಜದ ಮತ್ತೊಂದು ಅಭಿವ್ಯಕ್ತಿ

— ನೇಮಿ

'ಸೂಳೆ' ಎಂಬ ಪದಕ್ಕೆ ಕನ್ನಡದಲ್ಲಿ ಪುಲ್ಲಿಂಗ ಪದವಿಲ್ಲ. ಇಂಗ್ಲಿಷಿನಲ್ಲಿ 'Gigolo' ಎಂಬ ಪದ ಪುರುಷ ವೇಶ್ಯೆಯರನ್ನು ವಿವರಿಸುತ್ತದೆ. ಬಹುಶಃ 'ಸೂಳೆ' ಪದಕ್ಕೆ ಪುಲ್ಲಿಂಗದ ಅಗತ್ಯ ಬೀಳಬಹುದೆಂದು ನಮ್ಮ ಸಂಪ್ರದಾಯದ ಪಿತೃಪ್ರಧಾನ ಸಮಾಜ ಕನಸಿನಲ್ಲೂ ಯೋಚಿಸಿರಲಿಕ್ಕಿಲ್ಲ. ಸೀತೆ ಸಾವಿತ್ರಿಯರ ನಾಡಿನಲ್ಲಿ, ನಿಂತ ನೀರಿನಲ್ಲಿ ಪರಪುರುಷನನ್ನು ಕಂಡೇ ಅಪವಿತ್ರರಾಗುವ ಪತಿವ್ರತೆಯರ ಭೂಮಿಯಲ್ಲಿ ಸೂಳೆ ಪದಕ್ಕೆ ಪುಲ್ಲಿಂಗವನ್ನೆಲ್ಲಿ ಚಿಂತಿಸಲು ಸಾಧ್ಯ ? ಶೀಲದ ಸುತ್ತಲೇ ಸ್ತ್ರೀಯರನ್ನು ಕಟ್ಟಿಟ್ಟ ಸಮಾಜದಲ್ಲಿ ಆರ್ಥಿಕವಾಗಿ ಪುರುಷರನ್ನು ಅವಲಂಬಿಸಿದ ಹೆಣ್ಣುಗಳಿಗೆ ಪುರುಷ ವೇಶ್ಯೆಯರ ಕಲ್ಪನೆಯೂ ಸಾಧ್ಯವಿರಲಿಲ್ಲ. ಆದರೆ ಇಂದು ಭಾರತದಲ್ಲಿ ಸುಮಾರು ಒಂದು ಸಾವಿರ ಪುರುಷ ವೇಶ್ಯೆಯರಿದ್ದಾರೆ ಎಂದರೆ, ಪುರುಷ ಪ್ರಧಾನ ಮನಸ್ಸುಗಳಿಗೆ ಆಘಾತವಾಗಬಹುದು. ತಟ್ಟನೆ ಸ್ತ್ರೀ ಸ್ವಾತಂತ್ರ್ಯವನ್ನು, ಸ್ತ್ರೀಯರ ಆರ್ಥಿಕ ಸ್ವಾವಲಂಬನೆಯನ್ನು ದೂಷಿಸಲು ಸನ್ನದ್ಧರಾಗಬಹುದು.

ಪುರುಷ ವೇಶ್ಯೆಯರೇ ಆಗಲಿ, ಸ್ತ್ರೀ ವೇಶ್ಯೆಯರೇ ಆಗಲಿ, 'ವೇಶ್ಯಾ'ವೃತ್ತಿ ಅಸ್ವಸ್ಥ ಸಮಾಜದ ಲಕ್ಷಣ. ಆದರೆ ಒಂದು ಕಾಲಕ್ಕೆ ನಮ್ಮ ಸಮಾಜದಲ್ಲಿ ಪುರುಷರು ಕಟ್ಟಿಕೊಳ್ಳುವವರ ಜೊತೆಗೆ ಇಟ್ಟುಕೊಳ್ಳುವವರು ಅವರ ಪೌರುಷದ ಸಂಕೇತವಾಗಿದ್ದರು. ಸ್ತ್ರೀಯರ ಪವಿತ್ರತೆಗೆ ವಿಪರೀತದ ಆದ್ಯತೆ ಕೊಟ್ಟು ಪುರುಷರ ಶೀಲಕ್ಕೆ ಬೇಲಿ ಹಾಕದ ಅಸಮತೋಲನದ ಸಮಾಜ 'ಸೂಳೆ'ಯರನ್ನು ಸೃಷ್ಟಿಸಿತು. ಎಲ್ಲಿಯೋ ಗಂಡಿನ ಲೈಂಗಿಕ ಕ್ರಿಯೆಯನ್ನು 'ಗಂಡು'ತನವಾಗಿಸಿ ವೀರತ್ವ–ಶೂರತ್ವಕ್ಕೆ ಏರಿಸಿದ ಸಮಾಜ, ಆತನಿಗೆ ತನ್ನ ದೈಹಿಕ ಆಕಾಂಕ್ಷೆಗಳ ಮೇಲೆ ಯಾವುದೇ ನಿಬಂಧನೆ ನಿಯಂತ್ರಣ ಹಾಕದೆ ಸೂಳೆಗಾರಿಕೆಗೆ ಜನ್ಮಕೊಟ್ಟಿತು. ಪುರುಷರೇ ಆಳಿದ, ಪುರುಷರೇ ನಿರ್ಮಿಸುವ ಕಾಯಿದೆ, ಕಾನೂನು, ನೀತಿ, ನಿಯಮಗಳು ಪುರುಷರಿಗಷ್ಟೇ ಅನುಕೂಲಕರವಿದ್ದು, ಸತೀಮಣಿಯರ ಪಕ್ಕದಲ್ಲಿಯೇ ಇವರ ಮನರಂಜಿಸಲು ಸೂಳೆಯರನ್ನೂ ಹುಟ್ಟು ಹಾಕಿದವು. ಪುರುಷರು ಮೂಲತಃ ತಾವು ತಮ್ಮ ಲೈಂಗಿಕತೆಗೆ ಯಾವ ಲಗಾಮು ಹಾಕಬೇಕಿಲ್ಲದೆ, ಅದನ್ನು ಎಲ್ಲಿ, ಯಾರಲ್ಲಿ ಹೇಗೆ ಬೇಕಾದರೂ ತೀರಿಸಿಕೊಳ್ಳಬಲ್ಲ ಹಕ್ಕಿನಲ್ಲಿ ಮೆರೆದರು.

ಲೈಂಗಿಕ ತೀವ್ರತೆ ಕೇವಲ ಪುರುಷರ ಸಹಜ ಗುಣ, ಹೆಣ್ಣು ಮೂಲತಃ ತಣ್ಣಗೆ ತನ್ನ ತಾಯ್ತನದ ಪೂರೈಕೆಗಷ್ಟೇ ಹರವಿಕೊಳ್ಳುವಳೆಂಬ ಸಾಮಾನ್ಯ ನಂಬುಗೆ, ಹೆಣ್ಣಿನ ಲೈಂಗಿಕತೆಯನ್ನು ಒಂದೆಡೆ ಗುರುತಿಸುವುದನ್ನು ಮರೆತಿದ್ದರೆ, ಮತ್ತೊಂದೆಡೆ ಗಂಡಿನ ಲೈಂಗಿಕತೆಗೆ ಕುಮ್ಮಕ್ಕು ಕೊಟ್ಟು, ರಿಯಾಯಿತಿ ನೀಡಿತು. ಬಹುಶಃ ಎಲ್ಲಾ ಗಂಡುಗಳೂ, ಹೆಣ್ಣುಗಳೂ, ಗಂಡಿನ ಅಗತ್ಯ ಹೆಚ್ಚಿನದೆಂದೇ ಭಾವಿಸಿ ಆತನ ಹೆಚ್ಚುವರಿ ಕಸರತ್ತುಗಳನ್ನು ಒಪ್ಪಿಕೊಂಡರು ಅಥವಾ ಆಯ್ಕೆ ಇಲ್ಲದ ಅವಲಂಬಿತ ಹೆಂಡತಿಯರು ತಮ್ಮ ಅಸಹಾಯಕತೆಯಲ್ಲಿ, ಸಹಿಸಿಕೊಳ್ಳಬೇಕಾದ, ಸಮರ್ಥಿಸಿಕೊಳ್ಳಬೇಕಾದ, ಸ್ವೀಕರಿಸಲೇಬೇಕಾದ ಅನಿವಾರ್ಯವೆಂದು ಸುಮ್ಮನಾದರು.

ಇಂದು ತಟ್ಟನೆ ಮಹಿಳೆಗೆ ಎಟುಕುತ್ತಿರುವ ಆರ್ಥಿಕ ಸ್ವಾತಂತ್ರ್ಯ ಹೊಸ ಗಂಡು–ಹೆಣ್ಣು ಸಮೀಕರಣಗಳನ್ನಷ್ಟೇ ಹೊರತರುತ್ತಿಲ್ಲ, ಆಕೆಯ ಲೈಂಗಿಕತೆಯನ್ನು ಕುರಿತಂತೆ ಶತಮಾನಗಳಿಂದ ಉಳಿದು ಬಂದ ಪ್ರತಿಮೆಯನ್ನು ತುಂಡರಿಸಿದೆ. ಪುರುಷ ವೇಶ್ಯೆಯರ ಇರುವು ಈಗ ತಟ್ಟನೆ ಪ್ರಧಾನ ಸಂಸ್ಕೃತಿಯ ಮುಖಕ್ಕೆ ಹಿಡಿದ ಕನ್ನಡಿಯಾಗಿ ನಿಂತಿದೆ. 'ಸೂಳೆ'ತನವನ್ನು ಒಪ್ಪಿಕೊಂಡು ಯಥೇಚ್ಛವಾಗಿ ಮುಂದುವರೆಯಲು ಬಿಟ್ಟ ಸಮಾಜ, ಒಮ್ಮೆ ತನ್ನೊಳಗೆ ಕೆದಕಿಕೊಂಡು ತಾನು ನಡೆದ ತಪ್ಪು ಹಾದಿಯ ತಿದ್ದಿಕೊಳ್ಳಲು ಕಾರಣವಾಗಬೇಕು. ಶೀಲ, ಪವಿತ್ರತೆಯ ಒತ್ತು, ಈ 'ಏಡ್ಸ್' ಕಾಲದಲ್ಲಾದರೂ ಗಂಡಿಗೂ ಅಗತ್ಯವಾಗಬೇಕು. ನಮ್ಮ ಸಮಾಜ ಸೂಳೆಯರಲ್ಲಿಗೆ ಹೋಗುವ ಗಂಡಿನತ್ತ ಅಸಹ್ಯದ ನೋಟ ಬೀರುವಷ್ಟು ಶುದ್ಧವಾಗಬೇಕು.

(24ನೇ ಪುಟಕ್ಕೆ)

# ಇನ್ನಿಲ್ಲವಾದ ಬೆಂಕಿಯ ಮಹಿಳೆ

---

**ಲೋಕಸಭೆಯಲ್ಲಿ ಸಮಿತಿಯೊಂದರ ಚೇರ್‌ಪರ್ಸನ್ ಆಗಿದ್ದ ರೇಣು ಚಕ್ರವರ್ತಿ ಕಾರ್ಯಕಲಾಪವನ್ನು ನಡೆಸುತ್ತಿದ್ದಾಗ ಸಮಿತಿಯ ತುಂಟ ಸದಸ್ಯರು ಅವರನ್ನು ಕುರಿತು ಹೇಗೆಂದು ಸಂಬೋಧಿಸಬೇಕು ಎಂದು ('ಸರ್' ಅಥವಾ 'ಮೇಡಂ') ಕೇಳಿದರು. ಈ ಹಾಸ್ಯವನ್ನು ಇಷ್ಟಪಡದ ರೇಣು ಕೂಡಲೇ 'ಈ ಕುರ್ಚಿಗೆ ಲಿಂಗವಿಲ್ಲ' ಎಂದು ಹಾಸ್ಯ ಮಾಡಿದವರ ಬಾಯಿ ಮುಚ್ಚಿಸಿದರು.**

---

"ನಾನು ಕೇಂಬ್ರಿಡ್ಜ್‌ನಲ್ಲಿ 1937 ರಿಂದ 1939ರವರೆಗೂ ಓದುತ್ತಿದ್ದಾಗ, ಯೂರೋಪಿನಲ್ಲಿ ಫ್ಯಾಸಿಸಂನ ಸಂಪೂರ್ಣ ಸ್ವರೂಪವನ್ನು ಕಂಡೆ. ಫ್ಯಾಸಿಸಂನ ಕ್ರೂರ, ಭಯಾನಕ ಸ್ವರೂಪವನ್ನು ಕಂಡ ನಂತರವೂ, ಅಂದು ಕೆಲವು ಜನರ ಅಭಿಪ್ರಾಯವಾಗಿದ್ದಂತೆ ಶತ್ರುವಿನ ಶತ್ರು ನನ್ನ ಸ್ನೇಹಿತ ಎಂಬ ನಿರ್ಧಾರಕ್ಕೆ ಬರಲಿಲ್ಲ. ಜರ್ಮನಿ ಮತ್ತು ಜಪಾನ್ ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರುದ್ಧ ಹೋರಾಡುತ್ತಿದುದರಿಂದ ನಮ್ಮ ವಿಮೋಚನಾ ಹೋರಾಟಕ್ಕೆ ಸಹಾಯ ಮಾಡುವ ಮಿತ್ರರೆಂದು ಅವರನ್ನು ನಾನು ಪರಿಗಣಿಸಲು ಸಾಧ್ಯವೇ ಇಲ್ಲ. ಸಾಮ್ರಾಜ್ಯಶಾಹಿಯ ದೌರ್ಜನ್ಯದ ವಿಕೃತ ಸ್ವರೂಪವಾದ ನಾಜ಼ಿಗಳ ವರ್ತನೆಯನ್ನು ಕಂಡಮೇಲೆ ಹೇಗಾದರೂ ಅವರ ವಿರುದ್ಧ ನಾವು ಹೋರಾಡಲೇಬೇಕು ಎಂದು ನಿರ್ಧರಿಸಿದೆ. ಅದರ ಜೊತೆಗೆ ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರುದ್ಧವೂ ಹೋರಾಡಲೇಬೇಕೆಂದು ನಿರ್ಧರಿಸಿದರೂ, ಫ್ಯಾಸಿಸಂಗೆ ಸಹಾಯ ಮಾಡುವುದರ ಮೂಲಕವಲ್ಲ ಎಂಬುದರ ಬಗ್ಗೆ ಅಚಲ ನಿರ್ಧಾರ ನಮ್ಮದಾಗಿತ್ತು."

"1939, ನನ್ನ ಜೀವನದಲ್ಲಿ ಮಹತ್ವದ ವರ್ಷವೂ ಹೌದು. ವಿದೇಶದಿಂದ ಆಗಷ್ಟೇ ಹಿಂತಿರುಗಿದ್ದ ನನ್ನಲ್ಲಿ ಹೋರಾಟದ ಕಿಚ್ಚು, ಚಿಂತನೆಗಳು ದೇಶದ ವಿಮೋಚನೆಗೆ ಹೋರಾಡಲು ನನ್ನನ್ನು ಪ್ರೇರೇಪಿಸಿತ್ತು. ನಾನು ಹುಟ್ಟಿ ಬೆಳೆದದ್ದು ರಾಷ್ಟ್ರೀಯವಾದಿ ಕುಟುಂಬದಲ್ಲಿ. ನನ್ನ ವಿದ್ಯಾಭ್ಯಾಸದ ಕಾಲದಲ್ಲಿ ಈ ಚಿಂತನೆಗೆ ಮತ್ತೊಂದು ಆಯಾಮ ಸಿಕ್ಕಿತು. ಆಗ ನಮ್ಮ ಹೋರಾಟ ದೇಶದ ರಾಜಕೀಯ ಸ್ವಾತಂತ್ರ್ಯವನ್ನಷ್ಟೇ ಅಲ್ಲ, ಸಮಾಜದ ದಲಿತರಿಗೆ, ಶೋಷಿತರಿಗೆ, ಬಡವರಿಗೆ ಸಾಮಾಜಿಕ ನ್ಯಾಯ ದೊರಕಿಸುವುದೂ ಆಗಿತ್ತು."

ಇಂತಹ ಪ್ರಖರ ಸೈದ್ಧಾಂತಿಕ ಸ್ಪಷ್ಟತೆ, ಕ್ರಾಂತಿಕಾರಿ ವಿಚಾರಗಳನ್ನು ತಮ್ಮ ಜೀವಿತದ ಕಡೆಯ ಗಳಿಗೆಯವರೆಗೂ ನಂಬಿದ್ದ, ಅದನ್ನೇ ಉಸಿರಾಗಿಸಿಕೊಂಡ ಮಹಾನ್ ಹೋರಾಟಗಾರ್ತಿ ಶ್ರೀಮತಿ ರೇಣು ಚಕ್ರವರ್ತಿ ಏಪ್ರಿಲ್ 16ರಂದು ಕೊನೆಯುಸಿರೆಳೆದರು. 'ಭಾರತದ ಮಹಿಳಾ ಚಳುವಳಿಯ ಅಧ್ವರ್ಯುಗಳಲ್ಲಿ ಒಬ್ಬರಾದ ರೇಣು ದೀದಿ ತಮ್ಮ ಸಂಘಟನೆಯ ಕಾರ್ಯಕ್ರಮಗಳಿಂದಷ್ಟೇ ಅಲ್ಲದೆ, ಅವರ 'ದಿ ಕಮ್ಯೂನಿಸ್ಟ್ ಇನ್ ಇಂಡಿಯನ್ ವಿಮೆನ್ಸ್ ಮೂವ್‌ಮೆಂಟ್' ಎಂಬ ಕೃತಿಯ ಮೂಲಕವೂ ಸದಾ ಹಸಿರಾಗಿ ನಮ್ಮ ನೆನಪಿನಲ್ಲುಳಿಯುತ್ತಾರೆ.

ಚಿನ್ನದ ಚಮಚ ಬಾಯಲ್ಲಿಟ್ಟುಕೊಂಡೇ ಹುಟ್ಟಿದ ರೇಣು ಹುಟ್ಟಿದ್ದು ಆಗರ್ಭ ಶ್ರೀಮಂತರ ಮನೆಯಲ್ಲಿ. ಕೇಂಬ್ರಿಡ್ಜ್‌ನಲ್ಲಿ ಅತ್ಯುನ್ನತ ವ್ಯಾಸಂಗ ಪಡೆದ ರೇಣು, ಸಿರಿವಂತಿಕೆಯೂ ಸೇರಿದಂತೆ ಪ್ರತಿಷ್ಠಿತ ಸಮಾಜದ ಪ್ರತಿಷ್ಠಿತ ವ್ಯಕ್ತಿಯಾಗಿಬಿಡಬಹುದಿತ್ತು. ರೇಣು ಬಂಗಾಳದಲ್ಲಿಪ್ರಸಿದ್ಧವಾದಸಾಂಪ್ರದಾಯಿಕವೂ, ಸಾತ್ವಿಕವೂ ಆದ ರಾಯ್ ಮತೆತನಕ್ಕೆ ಸೇರಿದವರು. ವೈದ್ಯಶಾಸ್ತ್ರ ಪ್ರವೀಣರಾಗಿ, ರಾಜಕೀಯದ ಸೆಳೆತಕ್ಕೆ ಸಿಕ್ಕಿ, ದೇಶ ಅವರ ಸೇವೆಗಾಗಿ ಕರೆದಾಗ ರಾಜಕೀಯಕ್ಕೆ ಧುಮುಕಿ ನಂತರ ಪಶ್ಚಿಮ ಬಂಗಾಳದ ಮುಖ್ಯಮಂತ್ರಿಯಾಗಿದ್ದು, ತಮ್ಮ ಪರಮ ಸೇವೆಗಾಗಿ 'ಭಾರತ ರತ್ನ' ಪ್ರಶಸ್ತಿ ಗಳಿಸಿದ ಬಿಧನ್ ಚಂದ್ರ ರಾಯ್ ಅವರ ಸೋದರನ ಮಗಳೇ ರೇಣು.

ಜೇಮ್ಸ್ ಕಾಮೆರೋನ್‌ರವರು ಹೇಳುವಂತೆ ಮೂವತ್ತರ ದಶಕದಲ್ಲಿ ಯುವಜನರು ತಮ್ಮನ್ನು ತಾವು ಕಮ್ಯೂನಿಸ್ಟರೆಂದು ಗುರುತಿಸಿಕೊಳ್ಳದಿದ್ದರೆ ಅಥವಾ ನಿಜವಾಗಿಯೂ ಕಮ್ಯೂನಿಸ್ಟರು ಆಗಿರದಿದ್ದರೆ, ತಮ್ಮ ಜೀವನಕ್ಕೆ ಅರ್ಥವೇ ಇಲ್ಲ ಎಂದುಕೊಂಡಿದ್ದ ಕಾಲವಾಗಿತ್ತು. ಅಂದಿನವರೆಗೂ ಸಂಪ್ರದಾಯಿಗಳ

ಆಗರವಾಗಿದ್ದ ಆಕ್ಸ್‌ಫರ್ಡ್ ವಿದ್ಯಾರ್ಥಿಗಳ ಸಂಘ 30ರ ದಶಕದ ಮಧ್ಯಭಾಗದಲ್ಲಿ "ರಾಜನಿಗಾಗಿ ಯುದ್ಧ ಮಾಡಬೇಡಿ", "ಕೆಂಬಾವುಟದ ಹೊರತು ಬೇರೆ ಯಾವ ಬಾವುಟಕ್ಕೂ ಮನ್ನಣೆ ಕೊಡಬೇಡಿ" ಎಂದು ನಿರ್ಣಯಗಳನ್ನು ಮಾಡುತ್ತಿದ್ದ ಕಾಲ. ಇಂತಹ ಸಶಕ್ತ ಪ್ರಭಾವ ವಲಯಕ್ಕೆ ಸಿಲುಕಿದ ಭಾರತೀಯ ಯುವಕ, ಯುವತಿಯರು ಈ ತಾತ್ವಿಕ ಚಿಂತನೆಯಿಂದ ಆಕರ್ಷಿತರಾದದ್ದು ಆಶ್ಚರ್ಯವೇನಲ್ಲ. ಕೇಂಬ್ರಿಡ್ಜ್‌ನಲ್ಲಿ ವಿದ್ಯಾರ್ಥಿಯಾಗಿದ್ದಾಗ, ಎಡ ಚಿಂತನೆಯ ನೇತೃತ್ವದ ಅಂತರರಾಷ್ಟ್ರೀಯ ವಿದ್ಯಾರ್ಥಿ ಸಮಾವೇಶಗಳಲ್ಲಿ ರೇಣು ಭಾಗವಹಿಸಿದ್ದುಂಟು. ನಂತರ ಭಾರತಕ್ಕೆ ಬಂದ ಮೇಲೆ ಆಕ್ಸ್‌ಫರ್ಡ್ ಬಿಟ್ಟು ಕಮ್ಯೂನಿಸ್ಟ್ ಪಕ್ಷ ಸೇರಲು ಬಂದ ನಿಖಿಲ್ ಚಕ್ರವರ್ತಿಯನ್ನು ಮದುವೆಯಾದರು.

ರೇಣು ತಮ್ಮ ಕರ್ತವ್ಯದಲ್ಲಿ ಧುಮುಕಿ ತಮ್ಮ ಎದೆಗಾರಿಕೆಯನ್ನ, ಅರ್ಥವಂತಿಕೆಯನ್ನು ಹೇಗೆ ತೋರಿದರು ಎಂಬುದನ್ನು ಕುರಿತು ಹೇಳುವ, ರೇಣುವರಿಗಿಂತ ಹತ್ತು ವರ್ಷ ಹಿರಿಯರಾದ ಕಮ್ಯೂನಿಸ್ಟ್ ನಾಯಕ ಹಿರೇನ್ ಮುಖರ್ಜಿ ಹೀಗೆ ನುಡಿಯುತ್ತಾರೆ : "ಪಕ್ಷ ಅವರಿಗೆ ವಹಿಸಿಕೊಟ್ಟ ಮಹಿಳಾ ವಿಮೋಚನಾ ಚಳುವಳಿಯ ಕೆಲಸವನ್ನು ಅವರು ಹಗಲಿರುಳು, ಮಳೆ–ಗಾಳಿ ಬಿಸಿಲೆನ್ನದೆ ನಿರ್ವಹಿಸಿದ ರೀತಿ ನನ್ನ ಮನದಂಗಳದಿಂದ ಎಂದಿಗೂ ಮಾಸದು. ಅವರದೇ ವಿಶಿಷ್ಟ ಚೈತನ್ಯದಿಂದ ಅವರು ಇಡೀ ಪಕ್ಷದ ನಾಯಕರಲ್ಲಿ ಮಹತ್ವದ ಸ್ಥಾನ ಪಡೆದರು." ಶ್ರೀಮಂತ ಕುಟುಂಬದ ಎಲ್ಲ ಸವಲತ್ತುಗಳನ್ನು ಅನುಭವಿಸಿ ಬೆಳೆದ ರೇಣು ಅವರು, ಗ್ರಾಮಗಳಲ್ಲಿ ಅತ್ಯಂತ ಬಡಜನರೊಂದಿಗೆ ಮಿಳಿತಗೊಂಡು ಅವರ ಕಷ್ಟ–ಸುಖಗಳಲ್ಲಿ ಪಾಲುದಾರರಾಗಿ, ಪಕ್ಷದ ನೀತಿಯನ್ನು ಜನಗಳಲ್ಲಿ ವಿವರಿಸುತ್ತಾ, ಕಮ್ಯೂನಿಸ್ಟರು ಹೊತ್ತಿದ್ದ ದೇಶದ್ರೋಹಿಗಳೆಂಬ ಆಪಾದನೆಯ ವಿರುದ್ಧ ಸತತ ಪ್ರಚಾರ ಮಾಡಿದರು.

1952ರಲ್ಲಿ ಭಾರತ ಗಣರಾಜ್ಯದಲ್ಲಿ ಕಮ್ಯೂನಿಸ್ಟ್ ಪಕ್ಷ ಮೊದಲ ಬಾರಿಗೆ ಸ್ಪರ್ಧಿಸಿದ್ದಾಗ ರೇಣು ಪಕ್ಷದ ಅಭ್ಯರ್ಥಿಯಾಗಿ ಆರಿಸಿ ಬಂದರು. 1962ರ ಚುನಾವಣೆಯಲ್ಲಿ ಪಶ್ಚಿಮ ಬಂಗಾಳದ ಲೋಕಸಭಾ ಚುನಾವಣೆಯಲ್ಲಿ ಸ್ಪರ್ಧಿಸಿದ್ದ ಎಲ್ಲ ಅಭ್ಯರ್ಥಿಗಳಿಗಿಂತ ಅತ್ಯಧಿಕ ಮತ ಪಡೆದು ವಿಜಯಿಯಾದರು. ರೇಣು ಹದಿನೈದು ವರ್ಷಗಳ ಪಾರ್ಲಿಮೆಂಟಿನ ಅನುಭವ ಸ್ಮರಣೀಯ. ಪ್ರಶ್ನೆಗಳ ವೇಳೆ, ಚರ್ಚೆಯ ವೇಳೆಯಲ್ಲಿ ಚುರುಕಾದ, ತಮ್ಮ ತೀಕ್ಷ್ಣಮತಿಯಿಂದ, ನವಿರಾದ ಮಾತು, ವಿಚಾರ ವಿಮರ್ಶೆಗಳಿಂದ ಅವರು ಉತ್ತಮ ಹೆಸರು ಪಡೆದಿದ್ದರು. ತಮ್ಮ ಮೃದುವಾದ ಮಾತಿನಿಂದಲೇ ಎದುರಾಳಿಯನ್ನು ಪೇಚಿಗೆ ಸಿಕ್ಕಿಸಬಲ್ಲ ಶಕ್ತಿಯಾಗಿದ್ದ ರೇಣು, ಆಂದಿನ ಪ್ರಧಾನ ಮಂತ್ರಿಯಾಗಿದ್ದ ಜವಹರಲಾಲ್‌ರವರನ್ನು ಹಲವಾರು ಬಾರಿ ಪೇಚಿಗೆ ಸಿಕ್ಕಿಸಿದ್ದುಂಟು. ಅವರ ವಾಗ್ಝರಿಯ ಹರಿತಕ್ಕೆ ಅವಕ್ಕಾದ ಲೋಕಸಭೆ ಅವರನ್ನು "ಬೆಂಕಿಯ ಮಹಿಳೆ" ಎಂದು ಕರೆಯುತ್ತಿದ್ದುದು ಉಂಟು.

1967ರಲ್ಲಿ ಆರು ತಿಂಗಳ ಕಾಲ ಕಲಕತ್ತೆಯ ರಾಜ್ಯ ಸರ್ಕಾರದಲ್ಲಿ ಸಚಿವೆಯಾಗಿಯೂ ಕೆಲಸ ಮಾಡಿದ ರೇಣು ಚಕ್ರವರ್ತಿಯವರಿಗೆ ಕೆಲಸ ಮಾಡಲು ಇದ್ದ ಅವಧಿ ಅತ್ಯಲ್ಪ. ಆ ಅಲ್ಪಾವಧಿಯಲ್ಲೇ ಸರ್ಕಾರಿ ರಿಮ್ಯಾಂಡ್ ಹೋಂನಲ್ಲಿದ್ದ ಅವ್ಯವಸ್ಥೆಯನ್ನು ಸರಿಪಡಿಸುವ ಕೆಲಸ ಮಾಡಿದರು. ಆಗ ಇದ್ದಂತಹ ಸಮಾಜ ಕಲ್ಯಾಣ ಸಮಿತಿಗಳನ್ನು ಸರ್ಕಾರ ತೆಗೆದು ಹಾಕುವ ನಿರ್ಧಾರ ಮಾಡಿತ್ತು. ಅದನ್ನು ಪುನರ್‌ರಚಿಸುವ ಕೆಲಸ ಮಾಡಿದ ರೇಣುವರಿಗೆ ಹೆಚ್ಚಿನ ಸಾಮರ್ಥ್ಯ ತೋರಲು ಅವಕಾಶವೇ ಇರಲಿಲ್ಲ.

1987ರಲ್ಲಿ ಬೆಂಗಳೂರಿಗೆ ಹೃದ್ರೋಗ ಚಿಕಿತ್ಸೆಗೆಂದು ಬಂದ ರೇಣು ಚಕ್ರವರ್ತಿ. ಜಾಗೃತಿ ಮಹಿಳಾ ಅಧ್ಯಯನ ಕೇಂದ್ರವು ವ್ಯವಸ್ಥೆಗೊಳಿಸಿದ ಸಭೆಯೊಂದನ್ನು ಕುರಿತು ಮಾತನಾಡಿದರು. ಎಪ್ಪತ್ತರ ವೃದ್ಧೆ ಚಿಕ್ಕ ಹುಡುಗಿಯಂತೆ, ಜೀವನೋತ್ಸಾಹದಿಂದ ಮೈಕಿನ ನೆರವಿಲ್ಲದೆ ಎರಡು ಘಂಟೆ ಮಾತನಾಡಿದರು. 'ಸತಿಪದ್ಧತಿ; ನಮ್ಮ ಮುಂದಿರುವ ಸವಾಲುಗಳು ವಿಷಯವನ್ನು ಕುರಿತು ಮಾತನಾಡಿದರೂ ಇಡೀ ಮಹಿಳೆಯರ ಸಮಸ್ಯಾತ್ಮಕ ಸ್ಥಿತಿಯನ್ನು ತರ್ಕಬದ್ಧವಾಗಿ ವಿಶ್ಲೇಷಿಸಿದರು. ತುಂಬಿದ್ದ ಸಭೆ ರೇಣು ಅವರ ವಿಚಾರ ಸರಣಿ, ವಾದ ವೈಖರಿಗೆ ಬೆರಗಾಯಿತು. ಬೆಂಗಳೂರಿನಲ್ಲಿ ಅವರು ತಂಗಿದ್ದ ಮೂರು ದಿನವೂ ನಮ್ಮೊಡನೆ ತೋರಿದ ಆತ್ಮೀಯತೆ, ವಿಚಾರ ವಿನಿಮಯ, ಸ್ನೇಹ ಎಂದೆಂದಿಗೂ ಹಸಿರಾಗಿರುವಂತದ್ದು.

ಈ ಬೆಂಕಿಯ ಮಹಿಳೆಯಲ್ಲಿದ್ದ ಬೆಂಕಿಯ ಕಾವು ಮಹಿಳಾ ಚಳವಳಿಯ ಚಾಲನೆಗೆ ಪ್ರೇರಕವಾಗಲಿ ಎಂದಷ್ಟೇ ಆಶಿಸಿ ಅಚಲ ತನ್ನ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ. ●

# "ಮಹಿಳೆಯರಿಗೂ ಭೂ ಒಡೆತನ"




"ಕೃಷಿಕ ಮಹಿಳೆಯರ ಸ್ಥಾನಮಾನ ಸುಧಾರಿಸ ಬೇಕಾದರೆ ಜೊತೆಗೆ ಎಲ್ಲ ಸೌಲಭ್ಯಗಳೂ ಸಿಗಬೇಕು. ಭೂಮಿ ಹಂಚುವ ಸಮಯದಲ್ಲಿ, ಅದರ ಒಡೆತನ ಗಂಡ ಹೆಂಡತಿ ಇಬ್ಬರ ಹೆಸರಿನಲ್ಲೂ ಇರಬೇಕು" ಎಂದು ಮಹಿಳಾ ಮತ್ತು ಕಲ್ಯಾಣ ಇಲಾಖೆಯ ನಿರ್ದೇಶಕಿ ಶ್ರೀಮತಿ ಅನಿತಾ ಕೌಲ್‌ರವರು ಒತ್ತಿ ಹೇಳಿದರು. ಸಂದರ್ಭ : ಬೆಂಗಳೂರು ವಿಶ್ವವಿದ್ಯಾ ನಿಲಯದ ಪ್ರಸಾರಾಂಗ ಮತ್ತು ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ಸಂಯುಕ್ತಾಶ್ರಯದಲ್ಲಿ ಅಂತರ ರಾಷ್ಟ್ರೀಯ ಮಹಿಳಾ ದಿನಾಚರಣೆಯ ಅಂಗವಾಗಿ "ಪ್ರಗತಿಯತ್ತ ಮಹಿಳೆ" ಎಂಬ ವಿಷಯವಾಗಿ ಏರ್ಪಡಿಸಿದ್ದ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಭಾಷಣ ಮಾಡಿದ ಶ್ರೀಮತಿ ಅನಿತಾ ಕೌಲ್‌ರವರ ಮಾತುಗಳಿವು. ಮುಂದುವರೆದು ಶ್ರೀಮತಿ ಕೌಲ್ ರವರು "ಭೂ ಹೀನರಿಗೆ ಭೂಮಿ ನೀಡುವಾಗ ಪಟ್ಟಾ ವನ್ನು ಪುರುಷರ ಹೆಸರಿಗೆ ಮಾಡಲಾಗುತ್ತದೆ. ಇದ ರಿಂದ ಕೃಷಿಕ ಮಹಿಳೆಯರಿಗೆ ಅನ್ಯಾಯವಾಗುತ್ತದೆ. ಆದುದರಿಂದ ಮಹಿಳೆಯರಿಗೂ ಭೂ ಒಡೆತನ ಒದಗು ವಂತೆ ಸರ್ಕಾರ ಆದೇಶ ಹೊರಡಿಸಬೇಕು" ಎಂದರು. ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ದ್ವೈಮಾಸಿಕ "ಅಚಲ" ಪತ್ರಿಕೆಯ ವಿಶೇಷ ಸಂಚಿಕೆಯನ್ನೂ ಶ್ರೀಮತಿ ಕೌಲ್ ಬಿಡುಗಡೆ ಮಾಡಿ ಪತ್ರಿಕೆಗೆ ಶುಭ ಹಾರೈಸಿದರು. ಸಮಾರಂಭದ ಅಧ್ಯಕ್ಷತೆಯನ್ನು ಸುಮಂಗಲಿ ಸೇವಾಶ್ರಮದ ಶ್ರೀಮತಿ ಎಸ್. ಜಿ. ಸುಶೀಲಮ್ಮ ನಿರ್ವಹಿಸಿದರು.

"ಮಹಿಳೆ ಮತ್ತು ಸಂಘಟನೆ" ಮತ್ತು "ಮಹಿಳೆ ಮತ್ತು ಕಾನೂನು" ಎಂಬ ಎರಡು ವಿಷಯಗಳನ್ನು ಕುರಿತು ಎರಡು ವಿಚಾರಗೋಷ್ಠಿಯನ್ನು ಏರ್ಪಡಿಸ ಲಾಗಿತ್ತು. 'ಮಹಿಳೆಯರ ಜಾಗೃತಿಯತ್ತ ಸುಧಾರಣಾ ಪ್ರಯತ್ನಗಳು' ಎಂಬ ವಿಷಯವಾಗಿ ಮಾತನಾಡಿದ ಶ್ರೀಮತಿ ಶಾಂತಾ ನಾಗರಾಜ್‌ರವರು ಹಲವಾರು ವರ್ಷಗಳಿಂದ ಮಹಿಳೆಯರ ಸ್ಥಿತಿ–ಗತಿಗಳ ಸುಧಾ ರಣೆಯ ಬಗ್ಗೆ ಮಾಡಿರುವ ಪ್ರಯತ್ನಗಳನ್ನು ವಿವರಿಸಿ ದರು. ಮೈಸೂರಿನ ಸಮತಾದ ಶ್ರೀಮತಿ ರತಿರಾವ್ ರವರು 'ಸಾಮಾಜಿಕ ಬದಲಾವಣೆಗಾಗಿ ಆಂದೋಲನ ಗಳು' ಎನ್ನುವ ವಿಷಯದ ಬಗ್ಗೆ ಮಾತನಾಡಿ ಸಮಾ ನತೆಯನ್ನು ದೊರಕಿಸಿಕೊಳ್ಳಲು ಮಹಿಳೆಯರ ಆಂದೋಲನದ ಅಗತ್ಯವಿದೆ ಎಂದು ಹೇಳಿದರು. ಈ ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದ ನಿವೃತ್ತ ಪ್ರಾಧ್ಯಾ ಪಕ ಡಾ॥ ಜಿ. ರಾಮಕೃಷ್ಣರವರು ತಮ್ಮ ಭಾಷಣದಲ್ಲಿ ಸೈದ್ಧಾಂತಿಕ ನೆಲೆ ಇರುವಂತಹ ಹೋರಾಟದ ಅಗತ್ಯ ವನ್ನು ಒತ್ತಿ ಹೇಳಿದರು.

"ಮಹಿಳೆ ಮತ್ತು ಕಾನೂನು" ಎಂಬ ವಿಚಾರ ಸಂಕಿರಣದಲ್ಲಿ ನ್ಯಾಯವಾದಿ ಶ್ರೀಮತಿ ಹೇಮಲತಾ ಮಹಿಷಿ "ಮತೀಯ ಕಾನೂನುಗಳು ಮತ್ತು ಮಹಿಳೆ"

(24ನೇ ಪುಟನೋಡಿ)

# ಮಹಿಳೆ ಮತ್ತು ಕೋಮುವಾದ

—ಸಾರಾ ಅಬೂಬಕ್ಕರ್

ಅನಾದಿ ಕಾಲದಿಂದಲೂ ಮಹಿಳೆಯರ ಮೇಲೆ ದಬ್ಬಾಳಿಕೆ ನಡೆಸಲು ಎಲ್ಲ ಧರ್ಮದ ಪುರುಷರು ಕೈಗೆತ್ತಿಕೊಂಡ ಪ್ರಬಲ ಅಸ್ತ್ರವೇ ಕಾರ್ಮಿಕತೆಯಿಂದ ಹುಟ್ಟಿಕೊಂಡ ಧರ್ಮಾಂಧತೆ ಮತ್ತು ಅದರ ಇನ್ನೊಂದು ರೂಪಾಂತರವಾದ ಕೋಮುವಾದ. ಮಹಿಳೆಯರು ಮುಂದುವರಿದಂತೆ, ಸಮಾನತೆಗಾಗಿ ಹೋರಾಟ ನಡೆಸಿದಂತೆ, 'ಮಹಿಳೆ ಎಂದಿಗೂ ಪುರುಷರಿಗೆ ಸಮಾನಳಲ್ಲಳ; ಕೆಯ ಸ್ಥಾನ ಮನೆಯೊಳಗೆ' ಎಂಬ ವಾದವೂ ಬಲಗೊಳ್ಳುತ್ತಿದೆ. ಆಕೆಯನ್ನು ಮೆಟ್ಟಿ ತುಳಿಯಲು, ಶೋಷಿಸಲು ಹೊಸ ಹೊಸ ಹಾದಿಗಳನ್ನು ಹುಡುಕಲಾಗುತ್ತಿದೆ. ಮೂಢ ನಂಬಿಕೆಯ ಪರಾಕಾಷ್ಠೆಯಾದ ಸತೀ ಸಹಗಮನದಿಂದಾರಂಭಿಸಿ ತೀರಾ ಇತ್ತೀಚಿಗಿನದಾದ ಮತ್ತು ತೀರಾ ವೈಜ್ಞಾನಿಕವೂ ಆದ ಭ್ರೂಣ ಪರೀಕ್ಷೆ ಮತ್ತು ಹೆಣ್ಣು ಭ್ರೂಣ ಹತ್ಯೆಯವರೆಗೆ ಹಲವು ವಿಧಗಳಲ್ಲಿ ಹೆಣ್ಣಿನ ಶೋಷಣೆ ನಡೆಯುತ್ತಿದೆ. ಅಂದರೆ ಅಜ್ಞಾನದ ಮೂಢನಂಬಿಕೆಯನ್ನಾಗಲಿ, ವಿಜ್ಞಾನದ ಪ್ರಗತಿಯನ್ನಾಗಲಿ ಎಲ್ಲವನ್ನೂ ಪುರುಷ ಪ್ರಧಾನ ಸಮಾಜ ಹೆಣ್ಣಿನ ಶೋಷಣೆಗೆ ಬಳಸಿಕೊಳ್ಳುತ್ತಿದೆ.

ಮುಸ್ಲಿಂ ಕೋಮುವಾದ ಮುಸ್ಲಿಂ ಮಹಿಳೆಯರ ಹಕ್ಕುಗಳನ್ನು ಹತ್ತಿಕ್ಕಿದ ಒಂದು ಘಟನೆ 1986ರಲ್ಲಿ ನಮ್ಮ ದೇಶದಲ್ಲಿ ನಡೆಯಿತು. ತಲಾಖ್ ನೀಡಿದ ಮಹಿಳೆಯೋರ್ವಳಿಗೆ ಜೀವನಾಂಶ ನೀಡಬೇಕೆಂದು ಶ್ರೇಷ್ಠ ನ್ಯಾಯಾಲಯ ತೀರ್ಪು ನೀಡಿದ್ದನ್ನೇ ಹೇತುವಾಗಿಸಿಕೊಂಡು ಕೋಮುವಾದಿ ಮುಸ್ಲಿಂ ನಾಯಕರು ದೇಶಾದ್ಯಂತ ಮುಸ್ಲಿಮರನ್ನು ಸಂಘಟಿಸಿ, ತಲಾಖ್ ನೀಡಿದ ಮಹಿಳೆಗೆ ಆ ಗಂಡ ಜೀವನಾಂಶ ನೀಡುವುದು ಧರ್ಮ ವಿರೋಧಿ ಎಂದು ಕೂಗೆಬ್ಬಿಸಿದರು. ಇದರ ಪರಿಣಾಮವಾಗಿ ಮುಸ್ಲಿಂ ಕೋಮುವಾದಿ ನಾಯಕರುಗಳ ಒತ್ತಾಯಕ್ಕೆ ಮಣಿದು ಆಗಿನ ನಮ್ಮ ಸರಕಾರ ಮುಸ್ಲಿಂ ಮಹಿಳೆಯರಿಗೆ ತೀರಾ ಅನ್ಯಾಯ ಮಾಡುವಂತಹ ಮುಸ್ಲಿಂ ಮಹಿಳಾ ಮಸೂದೆಯನ್ನು ಅಂಗೀಕರಿಸಿತು. ಮಾತ್ರವಲ್ಲ, ಈ ದೇಶದ ಸಂವಿಧಾನದ ದಂಡಸಂಹಿತೆ 125ರಿಂದ ಮುಸ್ಲಿಮರನ್ನು ಹೊರಗುಳಿಸಿ ತಲಾಖ್ ಪೀಡಿತ ಮುಸ್ಲಿಂ ಮಹಿಳೆ ನ್ಯಾಯಾಲಯದ ಮೊರೆ ಹೋಗದಂತೆ ಆಕೆಯನ್ನು ತಡೆಗಟ್ಟಿತು. ಇದೆಲ್ಲವೂ ಈಗ ಇತಿಹಾಸ.

ಹಿಂದೂ ಕೋಮುವಾದದ ಕೆಲವು ಚಿತ್ರಗಳೂ ನಮ್ಮ ಕಣ್ಣ ಮುಂದಿವೆ. ಕೇವಲ ನಾಲ್ಕೈದು ವರ್ಷಗಳ ಹಿಂದೆ ರಾಜಸ್ಥಾನದಲ್ಲಿ ರೂಪಾ ಕನ್ವರ್ ಎಂಬ ಹೆಣ್ಣುಮಗಳನ್ನು ಗಂಡನ ಚಿತೆಗೆ ನೂಕಿ ಜೀವಂತ ದಹನ ಮಾಡಿದ್ದನ್ನು ಯಾರೂ ಮರೆತಿರಲಾರರು. ಕೇವಲ ಇನ್ನೂರು ವರ್ಷಗಳ ಹಿಂದೆ ಸತಿ ಸಹಗಮನವೆಂಬುದು ಈ ದೇಶದ ಹಲವಾರು ಮಹಿಳೆಯರ ಬದುಕಿನ ಒಂದು ಭಾಗವೇ ಆಗಿತ್ತು. ಅಂದರೆ ಇದು ಮಧ್ಯಯುಗದ ಸ್ತ್ರೀಯರ ಬದುಕು ಹೇಗಿತ್ತು ಎಂಬುದರ ಒಂದು ಮಾದರಿಯಷ್ಟೇ ? ಹೆಣ್ಣಿನ ಜೀವಕ್ಕೆ ಚಿಕ್ಕಾಸಿನ ಬೆಲೆಯೂ ಇಲ್ಲದಿದ್ದ ದಿನಗಳವು. ಮತಾಂಧತೆ ಮನುಷ್ಯರಿಂದ ಎಂತೆಂತಹ ಹೇಯ ಕೃತ್ಯಗಳನ್ನು ಎಸಗಿಸುತ್ತದೆ ಎಂಬುದಕ್ಕೆ ಒಂದು ಉದಾಹರಣೆ ;

ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಒಂದು ಕ್ರೂರ ಪದ್ಧತಿ. ರಾಜಾ ರಾಮ ಮೋಹನರಾಯ್ ಎಂಬ ಮಹಾಪುರುಷ ಈ ಕ್ರೂರ ಕೃತ್ಯಕ್ಕೆ ಅಂದಿನ ಬ್ರಿಟಿಷ್ ಸರಕಾರದಿಂದ ತೆರೆ ಎಳೆಸಿದ ಕಾರಣ ಸಾವಿರಾರು ಹೆಣ್ಣುಮಕ್ಕಳ ಪ್ರಾಣ ಉಳಿಯಿತು.

ಆದರೆ ಈಗ ನಾವು 21ನೇ ಶತಮಾನದ ಹೊಸ್ತಿಲಲ್ಲಿ ನಿಂತಿರುವ ಈ ಸಂದರ್ಭದಲ್ಲಿ ಅದೇ ಕ್ರೂರ ಕೃತ್ಯವನ್ನು ಹೆಣ್ಣು ಮಗಳೊಬ್ಬಳ ಮೇಲೆ ಹೇರಲಾಯಿತು ಎಂಬುದು ಏನನ್ನು ಸೂಚಿಸುತ್ತದೆ ? ಹಿಂದುತ್ವ ವಾದಿಗಳ ಕೋಮುವಾದಿಗಳ ಕೈಗೆ ಅಧಿಕಾರ ದೊರಕಿದರೆ ಈ ದೇಶದಲ್ಲಿ ಹೆಣ್ಣಿನ ಪರಿಸ್ಥಿತಿ ಏನಾಗುತ್ತದೆ ಎಂಬುದಕ್ಕೆ ಇದೊಂದು ಮುನ್ಸೂಚನೆಯಷ್ಟೇ. ಕೇವಲ ಹದಿನೆಂಟು ವರ್ಷಗಳ ಹಿಂದೆ ಮಠಾಧಿಪತಿಗಳೊಬ್ಬರು ಸಾರ್ವಜನಿಕ ಸಭೆಯೊಂದರಲ್ಲಿ ಭಾಷಣ ಮಾಡುತ್ತಾ,

ಮಹಿಳೆಯರ ತಲೆ ಕೂದಲು ಆಕರ್ಷಕವಾಗಿರುವುದರಿಂದ ವಿಧವೆಯರು ಪುರುಷರಿಂದ ಆಕರ್ಷಿಸಲ್ಪಡದಿರಲು ತಲೆ ಬೋಳಿಸಿಕೊಳ್ಳುವುದು ತಪ್ಪಲ್ಲ ಎಂದು ವಿಧವೆಯರ ಕೇಶ ಮುಂಡನವನ್ನು ಸಮರ್ಥಿಸಿದ್ದು, ರೂಪಾ ಕನ್ವರ್‌ಳ ಸತೀ ಸಹಗಮನವನ್ನು ಜಗದ್ಗುರುಗಳೊಬ್ಬರು ಸಮರ್ಥಿಸಿದ್ದು ಎಲ್ಲವೂ ಮಹಿಳೆಯರ ಪಾಲಿಗೆ ಬರಲಿರುವ ಕರಾಳ ದಿನಗಳ ಮುನ್ಸೂಚನೆಯಷ್ಟೇ. ಪುನರುತ್ಥಾನವಾದಿಗಳ ಕೈಗೆ ಅಧಿಕಾರ ದೊರೆತರೆ ಈ ದೌರ್ಜನ್ಯಗಳೆಲ್ಲವೂ ಧರ್ಮ ಸಮ್ಮತವೆನಿಸುತ್ತವೆ. ಸವದತ್ತಿಯ ಎಲ್ಲಮ್ಮ ದೇವತೆಯ ಸೇವೆಗೆ ಹೆಣ್ಣು ಮಕ್ಕಳನ್ನು ಮೀಸಲಿಡುವ ನೆಪದಲ್ಲಿ ಹೆಣ್ಣು ಮಕ್ಕಳನ್ನು ವೇಶ್ಯಾವಾಟಿಕೆಗೆ ತಳ್ಳುವುದು, ಕತ್ತಲೆಸೇವೆ, ಬೆತ್ತಲೆಸೇವೆ ಎಲ್ಲವೂ ಸಂಸ್ಕೃತಿಯ ಭಾಗವಾಗಿ, ಹಿಂದುತ್ವವಾದಿಗಳ, ಪುನರುತ್ಥಾನವಾದಿಗಳ ಸಮರ್ಥನೆಗೆ ತುತ್ತಾಗಿ ಧಾರ್ಮಿಕ ಪರಂಪರೆಯ ನೆರಳಿನಲ್ಲಿ ಮತ್ತೊಮ್ಮೆ ಆಶ್ರಯ ಪಡೆಯಲಿವೆ. ವಿಧವಾ ವಿವಾಹವನ್ನು ಹೆಣ್ಣು ಮಕ್ಕಳು ಕನಸಿನಲ್ಲೂ ಊಹಿಸಬಾರದಂತಹ ಪರಿಸ್ಥಿತಿ ಎದುರಾಗಬಹುದು. ತವರಿನ ಆಸ್ತಿಯಲ್ಲಿ ಪಾಲು ಕೇಳುವ ಹಕ್ಕನ್ನು ಕೂಡಾ ಹಿಂದೂ ಮಹಿಳೆಯರು ಕಳೆದುಕೊಳ್ಳಲಿದ್ದಾರೆ. ಆದುದರಿಂದ ಎಲ್ಲ ಮಹಿಳೆಯರೂ ಸಕಾಲದಲ್ಲಿ ಎಚ್ಚೆತ್ತು ಈ ಕೋಮುವಾದದ ವಿರುದ್ಧ ಸಂಘಟಿತರಾಗಿ ಹೋರಾಡಬೇಕಾಗಿದೆ.

**ಸೌಜನ್ಯ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ**

---

## ಬವೇರಿಯಾ ರಕ್ಷಿಸಿದ ಸ್ತ್ರೀಯರು

ಬವೇರಿಯಾ ದೇಶದ ಅಧಿಪತಿಗೂ ಜರ್ಮನ್ ಚಕ್ರವರ್ತಿಗೂ ಮನಸ್ತಾಪ ಉಂಟಾಗಿ ಚಕ್ರವರ್ತಿಯು ದೊಡ್ಡ ಸೈನ್ಯದೊಡನೆ ಬವೇರಿಯಾದ ರಾಜಧಾನಿಯನ್ನು ಮುತ್ತಿಗೆ ಹಾಕಿ ವಶಪಡಿಸಿಕೊಂಡ. ಅಷ್ಟಕ್ಕೇ ಅವನ ಕೋಪ ಶಮನವಾಗಲಿಲ್ಲ. ಆ ನಗರವನ್ನೇ ನೆಲಸಮ ಮಾಡಲು ಆಜ್ಞೆ ನೀಡಿದ ನಂತರ ಅಲ್ಲಿನ ಸ್ತ್ರೀಯರ ಮೇಲಿನ ಕರುಣೆಯಿಂದ ಅವರನ್ನು ಮಾತ್ರ "ನೀವು ಹೊರುವಷ್ಟು ಭಾರದ ವಸ್ತುಗಳನ್ನು ತೆಗೆದುಕೊಂಡು ಹೊರಟು ಹೋಗಿರಿ" ಎಂದು ಆಜ್ಞಾಪಿಸಿದ. ಕೂಡಲೇ ಆ ಹೆಂಗಸರು ಹೊರಲಾಗದ ಹೊರೆ ಹೊತ್ತು ಕಷ್ಟಪಟ್ಟು ನಡೆಯಲಾರಂಭಿಸಿದರು. ಚಕ್ರವರ್ತಿ ಅದನ್ನು ನೋಡಿ ವಿಸ್ಮಿತರಾದರು. ಅವರುಗಳು ಹೊತ್ತುಕೊಂಡು ಹೋಗುತ್ತಿದ್ದುದು ಬೆಲೆಬಾಳುವ ವಸ್ತುಗಳನ್ನಲ್ಲ, ತಮ್ಮ ಗಂಡಂದಿರನ್ನು. ಬವೇರಿಯಾ ರಾಜನನ್ನು ಅವನ ರಾಣಿ ಹೊತ್ತುಕೊಂಡು ಹೊರಟಿದ್ದಳು. ಚಕ್ರವರ್ತಿಯ ಮನ ಕರಗಿತು. ಬವೇರಿಯಾವನ್ನು ಕ್ಷಮಿಸಿ ಅಲ್ಲಿಂದ ಚಕ್ರವರ್ತಿ ಹೊರಟುಹೋದ.

—ಫ್ರೆಂಚ್ ಮೇಧಾವಿ 'ಮನ್‌ಡೇನ್' ವಿವರಿಸಿದ್ದು

**ಕೃಪೆ : ಆನಂದ ವಿಗಡನ್**

ಅನುವಾದ : **ಎಸ್. ರಾಜಶೇಖರ್**

---

## ಅಭಿನಂದನೆ

* ಕರ್ನಾಟಕ ಪತ್ರಕರ್ತ ಅಕಾಡೆಮಿಯ ರಾಜ್ಯ ಪ್ರಶಸ್ತಿ ವಿಜೇತರಾದ ಶ್ರೀಮತಿ ನಾಗಮಣಿ ಎಸ್. ರಾವ್. ಶ್ರೀಮತಿ ಸುಶೀಲಾ ಕೊಪ್ಪರ್ ಮತ್ತು ಶ್ರೀಮತಿ ಕುಶಲ ಡಿ' ಮೆಲೋರಿಗೆ.

* ಶಾಶ್ವತಿ ಮಹಿಳಾ ಅಧ್ಯಯನ ಕೇಂದ್ರದ ತಿರುಮಲಾಂಬ ಪ್ರಶಸ್ತಿ ಪಡೆದ ಶ್ರೀಮತಿ ರಾಜಂ ಕೃಷ್ಣನ್, ಸದೋಧಿತಾ ಪ್ರಶಸ್ತಿ ಪಡೆದ ಡಾ॥ ವಿಜಯಾದಬ್ಬೆ ಹಾಗೂ ಶ್ರೀಮತಿ ಮಾಲಿನಿ ಮಲ್ಯರವರಿಗೆ, ಕರ್ನಾಟಕ ಶ್ರೀ ಪ್ರಶಸ್ತಿ ಪಡೆದ ಶ್ರೀಮತಿ ಪದ್ಮಾ ಶ್ರೀನಿವಾಸನ್‌ರವರಿಗೆ.

* ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ಶ್ರೀಮತಿ ತೇಜಸ್ವಿನಿ ನಿರಂಜನರಿಗೆ.

* ಕರ್ನಾಟಕ ಲೇಖಕಿಯರ ಸಂಘದ ಪ್ರತಿಷ್ಠಿತ ಬಹುಮಾನ ಅನುಪಮಾ ಪ್ರಶಸ್ತಿ ವಿಜೇತೆ ವೈದೇಹಿ ಅವರಿಗೆ, ಹೆಚ್. ವಿ. ಸಾವಿತ್ರಮ್ಮ ದತ್ತಿನಿಧಿ ಬಹುಮಾನ ಪಡೆದ ಶ್ರೀಮತಿ ಎಂ. ಎಸ್. ವೇದಾರವರಿಗೆ, ಗೀತಾ ದೇಸಾಯಿ ದತ್ತಿ ನಿಧಿ ಬಹುಮಾನ ಪಡೆದ ಶ್ರೀಮತಿ ರೇಖಾ ಕಾಖಂಡಕಿಯವರಿಗೆ.

## ಕಂಬನಿ

* ಕನ್ನಡ ಕಾದಂಬರಿ ಲೋಕದಲ್ಲಿ ಮಹತ್ವದ ಹೆಸರು ಶ್ರೀಮತಿ ಎಂ. ಕೆ. ಇಂದಿರಾ. ಮಲೆನಾಡಿನ ಜೀವನಾನುಭವದ ದಟ್ಟ ವಿವರಗಳಿಂದ ಕೂಡಿದ ಹಲವಾರು ಕಾದಂಬರಿಗಳನ್ನು ರಚಿಸಿದ ಎಂ. ಕೆ. ಇಂದಿರಾ ಇಂದು ನಮ್ಮೊಡನಿಲ್ಲ. ವೈಧವ್ಯ, ವಿಧವಾ ವಿವಾಹ, ವೇಶ್ಯಾ ಸಮಸ್ಯೆ ಮತ್ತು ಹೆಣ್ಣಿನ ಹಲವಾರು ಮುಖಗಳನ್ನು ಕುರಿತು ಕೃತಿ ರಚಿಸಿದ್ದ ಎಂ. ಕೆ. ಇಂದಿರಾರವರಿಗೆ 'ಅಚಲ' ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

* ಸ್ವಾತಂತ್ರ್ಯ ಪೂರ್ವ ಕಾಲದಲ್ಲಿ ಮಹಿಳೆಯರು ಬರವಣಿಗೆಯನ್ನು ಆರಂಭಿಸಿದ ಹೊತ್ತಿನಲ್ಲಿ ಬರವಣಿಗೆಗೆ ಕೈಹಾಕಿ ಕತೆಗಾರ್ತಿಯರ ಪರಂಪರೆಗೆ ನಾಂದಿ ಹಾಡಿದ ಕೆಲವೇ ಲೇಖಕಿಯರಲ್ಲಿ ಶ್ರೀಮತಿ ಸರಸ್ವತಿಬಾಯಿ ರಾಜವಾಡೆ ಪ್ರಮುಖರು. 'ಗಿರಿಬಾಲೆ'ಯೆಂದೇ ಪ್ರಸಿದ್ಧರಾದ ಕತೆಗಾರ್ತಿ, ಪತ್ರಕರ್ತೆ, ಶ್ರೀಮತಿ ರಾಜವಾಡೆಯವರು ಈ ಲೋಕದಿಂದ ದೂರ ಸರಿದಿದ್ದಾರೆ. ಅವರಿಗೆ ಅಚಲ ತನ್ನ ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

* ಭಾರತೀಯ ಮಹಿಳಾ ಚಳವಳಿಯ ಅಧ್ವರ್ಯುಗಳಲ್ಲಿ ಶ್ರೀಮತಿ ರೇಣುಚಕ್ರವರ್ತಿ ಪ್ರಮುಖರು. ಅಪಾರ ಬುದ್ಧಿಮತ್ತೆಯ, ಅಖಂಡ ಸೈದ್ಧಾಂತಿಕ ನಿಲುವಿನ ಈ ಹೋರಾಟಗಾರ್ತಿ ಮಹಿಳಾ ಸಮುದಾಯಕ್ಕೆ ಸದಾ ತಂಪಾದ ಹೆಸರು. ಈ ಮಹಿಳಾ ನಾಯಕಿಯ ಹೋರಾಟದ ವೀರಗಾಥೆಗೆ ನಮಿಸಿ ಅಚಲ ತನ್ನ ನಮನವನ್ನು ಸಲ್ಲಿಸುತ್ತದೆ.

(12ನೇ ಪುಟದಿಂದ)

ಗಾಂಧಿಯ ಜೀವನ ತತ್ವಗಳನ್ನು ಮಕ್ಕಳಿಗಾಗಿ ಸರಳ ಕಥೆಯ ರೂಪದಲ್ಲಿ ನಿರೂಪಿಸುವ 'ಗಾಂಧಿ ದರಿಸನಮ್' ಎಂಬ ಕೃತಿಯೊಂದು ಮತ್ತು ಮಹಿಳಾ ಅಧ್ಯಯನಕ್ಕೆ ಸಂಬಂಧಿಸಿದ 'ಕಾಲಂ ತೋರುಂ ಪೆಣ್' 'ಕಾಲಂ ತೋರುಂ ಪೆಣ್ಮೈ' ಎಂಬ ಎರಡು ಪ್ರಮುಖ ವೈಚಾರಿಕ ಕೃತಿಗಳನ್ನು ರಚಿಸಿದ್ದಾರೆ. 'ನಟ್ಪುರ ವಿನ್ ಇಳೈಪ್ಪು' ರಾಜಂ ಕೃಷ್ಣನ್ ರಚಿಸಿರುವ ಪ್ರವಾಸ ಕಥನ. ಪದ್ಮೈಯಿಲ್ ಪಾದಿನಾಥ ಅಡಿಗಳ್ (1991) ಮಯಿಲಂಪತ್ತು ವಳ್ಳಿ (1992) 'ಗೋಪುರ ಬೊಮ್ಮೈಗಳ್' (1993), 'ಯಾಡುಮುಕಿ ವಿಂಕೈ' (1994) ರಾಜಂ ಅವರ ಇತರ ಕೆಲವು ಕೃತಿಗಳು.

---

(16ನೇ ಪುಟದಿಂದ)

ಗಮನಿಸಬೇಕಾದ್ದು, ಈ ಗಂಡು ಸೂಳೆಯರು ಶೋಷಿತರಲ್ಲ. 'ಸೆಕ್ಸ್ ಮತ್ತು ಹಣ ಸುಲಭವಾಗಿ ದೊರೆಯುವುದಾದರೆ ಏಕೆ ಬೇಡ ?' ಎನ್ನುವವರು. ಇವರು ತಿಂಗಳಿಗೆ 20,000ದಿಂದ, ನಲವತ್ತು ಸಾವಿರ ದುಡಿಯುತ್ತೇವೆಂದು ಹೇಳಿಕೊಳ್ಳುತ್ತಾರೆ. ಆಂಗ್ಲ ಪತ್ರಿಕೆಯೊಂದಕ್ಕೆ ಹೇಳಿರುವಂತೆ 'ಅಪ್ಪಟ ಹಗುರಾದ ಸುಲಭ ಹಣಗಳಿಕೆಯ ಮಾರ್ಗ' ಎಂದಿದ್ದಾರೆ. ಎಳೆಯ ಹೆಣ್ಣು ಮಕ್ಕಳನ್ನು ಅಪಹರಿಸಿ, ಬಲಾತ್ಕರಿಸಿ, ಸೂಳೆ ತನಕ್ಕಿಳಿಸುವ ಕ್ರೌರ್ಯ, ಹಿಂಸೆ, ಶೋಷಣೆಯ ಬಲಿ ಪಶುಗಳು ಇವರಲ್ಲ. ಆದರೆ ಕಡಿವಾಣ ಹಾಕದೆ, ಸ್ವ-ವಿಮರ್ಶೆಗೆ ತೊಡಗದೆ, ಸಮಾನತೆಯ ಆಧಾರದ ಮೇಲೆ ಸಮಾಜ ನಿರ್ಮಾಣವಾಗದೆ ಮುಂದುವರೆದಲ್ಲಿ, ಅಸ್ವಸ್ಥತೆಯ ಬೀಜಗಳು ಮೊಳೆತು ಹೆಮ್ಮರವಾಗಿ, ನಾಳೆ ಗಂಡು ಮಕ್ಕಳನ್ನು ಸೂಳೇಗಾರಿಕೆಗಿಳಿಸುವ ಕಾಲವೂ ದೂರವಾಗದು.

---

(19ನೇ ಪುಟದಿಂದ)

ಬಗ್ಗೆ ಮಾತನಾಡಿ ಹಿಂದು, ಮುಸ್ಲಿಂ ಮತ್ತು ಕ್ರಿಶ್ಚಿಯನ್ ಕಾನೂನುಗಳಲ್ಲಿ ಮಹಿಳೆಯರಿಗಿರುವ ಸೌಲಭ್ಯಗಳನ್ನು ವಿವರಿಸಿದರು. ಅಧ್ಯಕ್ಷತೆ ವಹಿಸಿದ್ದ ಪ್ರೊ॥ ಬಿ. ಕೆ. ಚಂದ್ರಶೇಖರ್‌ರವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಭಾರತಕ್ಕೆ ಏಕರೂಪ ನಾಗರಿಕ ಸಂಹಿತೆಯ ಅಗತ್ಯವನ್ನು ಕುರಿತು ಮಾತನಾಡಿದರು.

ಪ್ರಾರಂಭದಲ್ಲಿ ಪ್ರಸಾರಾಂಗದ ಸಹಾಯಕ ನಿರ್ದೇಶಕರಾದ ಶ್ರೀ ಎಸ್. ಎಂ. ಹೊನ್ನಪ್ಪನವರು ಸ್ವಾಗತ ಭಾಷಣ ಮಾಡಿದರು.



---

*Reg No. MAG (5) PRC, DEGL 036/89/87*
BOOK-POST/Periodicals

*To*

*If undelivered please return to :*
**Jagruthi Mahila Adhyayana Kendra**
401, Vijay Tower, 2nd Main, RPC Layout
Vijayanagar, II Stage, Bangalore-560 040